ಬೆಲೆ: ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
DEC. 9
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor: H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೯ — ೧೨ — ೧೯೪೬ [ ಸಂಚಿಕೆ ೩೩



# ಆಕಾಶ ಜರಿದರೂ ಭೂಮಿ ಬಿರಿದರೂ ಘಟನಾ ಸಮಿತಿ ಸೇರಿತೀರುವದು:

## ಬ್ರಿಟಿಶರು ಪಾಕಿಸ್ತಾನ ಕೊಡಲಾರರು—ಮನವರಿಕೆ ಯಾದರೆ ನಾವು ಕೊಟ್ಟೇವು: ಹಿಂಸೆಗೆ ಬಗ್ಗುವದಿಲ್ಲ

### ಸರದಾರ ಪಟೇಲರ ನಿಷ್ಠುರ ಎಚ್ಚರಿಕೆ

### "ನೂರು ಜಿನ್ನಾರು ಸೇರಿದರೂ ಜನರ ಅದಲು ಬದಲು ಅಸಾಧ್ಯ"

ಪಂಡಿತ ಜವಾಹರಲಾಲರು ಬ್ರಿಟಿಶ ಮಂತ್ರಿಗಳ ವಿನಂತಿಯನ್ನು ಮನ್ನಿಸಿ ಲಂಡನ್ನಿಗೆ ಹೋದುದರಿಂದ ಕಾಂಗ್ರೆಸ್ಸು ಪುನ: ಮುಸ್ಲಿಂ ಲೀಗಿಗೆ ಹೆಚ್ಚು ಸೌಕರ್ಯ ಕೊಡಲು ಹೊರಟದೆಯೆಂಬ ಸಂದೇಹವುಂಟಾದೀತು. ಆದರೆ ಕಾಂಗ್ರೆಸ್ಸು ಮನಸ್ಸನ್ನು ಕಲ್ಲು ಮಾಡಿದೆಯೆಂದೂ ಅದು ಯಾವ ವಿಷಯದಲ್ಲಿಯೂ ಸಡಿಲು ಬಿಡಲು ಸಿದ್ಧವಿಲ್ಲವೆಂದೂ ಸರದಾರ ಪಟೇಲರು ಕಳೆದವಾರ ನಾಗಪೂರ ವಿಶ್ವವಿದ್ಯಾಲಯದಲ್ಲಿಯೂ ಮುಂಬಯಿಯಲ್ಲಿಯೂ ಮಾಡಿದ ಸ್ಪಷ್ಟ ಭಾಷಣಗಳಿಂದ ತಿಳಿಯಬಹುದು. ಬೇಕಾದ್ದು ಬರಲಿ ಪಾಕಿಸ್ತಾನವನ್ನು ವಿರೋಧಿಸುವೆವು. ಭೂವ್ಯಾಕಾಶವೊಂದಾದರೂ ಘಟನಾ ಸಮಿತಿ ಸಕಾಲಕ್ಕೆ ಸೇರುವದು ಮತ್ತು ಕಾಂಗ್ರೆಸ್ಸು ಸರ್ವಥಾ ಅಧಿಕಾರತ್ಯಾಗಮಾಡುವದಿಲ್ಲ ಎಂದವರು ಎರಡೂ ಭಾಷಣಗಳಲ್ಲಿ ಜಳಜಳ ಹೇಳಿದ್ದಾರೆ. ನೂರು ಜಿನ್ನಾರು ಸೇರಿದರೂ ಹಿಂದುಸ್ತಾನದಲ್ಲಿ ಜನರನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸಿ ಅದಲು ಬದಲು ಮಾಡುವದಸಾಧ್ಯವೆಂದೂ ಅವರು ಸಾರಿದ್ದಾರೆ.

ಅವರು ಮುಂಬೈಯ ಒಂದು ಲಕ್ಷ ಮಿಕ್ಕಿದ ಜನಸಂದಣಿಯಲ್ಲಿ ಭಾಷಣ ಮಾಡಿ ಹೇಳಿದ್ದು:—

ಇಂದು ಭಾರತ ಪರಿಸ್ಥಿತಿ— ಮುಂಬಯಿ ಪರಿಸ್ಥಿತಿ— ನೋಡಿ ನನಗೆ ದುಃಖವಾಗಿದೆ. ಬ್ರಿಟಿಶ ಮಂತ್ರಿ ಮಂಡಲದ ತ್ರಿಮೂರ್ತಿಗಳು ಇಲ್ಲಿಗೆ ಬಂದದ್ದು ಎಲ್ಲರಿಗೂ ಗೊತ್ತಿದ್ದ ಸಂಗತಿಯಾಗಿದೆ. ಅವರು ಇಂಗ್ಲಂಡದಿಂದ ಹಿಂದುಸ್ತಾನಕ್ಕೆ ಹೊರಡುವ ಪೂರ್ವದಲ್ಲಿ, ಮುಖ್ಯ ಮಂತ್ರಿಗಳಾದ ಶ್ರೀ ಅ್ಯಟ್ಲಿಯವರು 'ಬ್ರಿಟಿಶರು ಹಿಂದುಸ್ತಾನವನ್ನು ಹಿಂದೀಯರಿಗೆ ಒಪ್ಪಿಸಿ, ಹಿಂದುಸ್ತಾನದ ರಾಜ್ಯಘಟನೆಯನ್ನು ಹಿಂದೀಯರು ತಮ್ಮ ಮನಬಂದಂತೆ ಮಾಡಿಕೊಳ್ಳಲು ಅವಕಾಶ ಕೊಡುವೆವು. ಹಿಂದುಸ್ತಾನದ ಮೇಲೆ ನಮ್ಮ ಪ್ರಭುತ್ವ ಇರುವದು ನಮಗೆ ಬೇಕಾಗಿಲ್ಲ. ಹಿಂದುಸ್ತಾನವು ಬ್ರಿಟನದ ಮಿತ್ರ ರಾಷ್ಟ್ರವಾಗಿ ಉಳಿದರೆ ಸಾಕು. ಈ ಉದ್ದೇಶದಿಂದ ಇಲ್ಲಿಂದ ಮಂತ್ರಿಗಳ ಶಿಷ್ಟಮಂಡಳ ಭಾರತಕ್ಕೆ ಹೋಗಲಿದೆ' ಎಂದು ಹೇಳಿದರು. ಅ್ಯಟ್ಲಿಯವರ ಭಾಷಣದಲ್ಲಿ ಹಿಂದೂ ಮುಸಲ್ಮಾನರ ಒಪ್ಪಂದದ ವಿಷಯದಲ್ಲಿ, ಒಪ್ಪಂದವಾಗಲೆಂದು ಹಾರೈಸಿ, ಒಂದು ವೇಳೆ ಒಪ್ಪಂದವಾಗದಿದ್ದರೆ, ಹಿಂದುಸ್ತಾನದ ಸ್ವಾತಂತ್ರ್ಯದ ಪ್ರಗತಿಗೆ ಯಾವ ಅಲ್ಪ ಸಂಖ್ಯಾಕರಿಂದಲೂ— ಅಲ್ಪಸಂಖ್ಯಾಕ ಪಕ್ಷವು ಬೇಕಾದಷ್ಟು ಪ್ರಬಲ ಪಕ್ಷವಿದ್ದರೂ— ತಡೆಯಾಗಕೂಡದು, ಎಂದೂ ಸ್ಪಷ್ಟವಾಗಿ ಸಾರಿದ್ದಾರೆ.

ಆಮೇಲೆ ಮಂತ್ರಿಗಳ ಘೋಷಣೆ ಮೇ ೧೬ಕ್ಕೆ ಆಗಿ ನಡುಗಾಲ ಸರಕಾರದ ಸ್ಥಾಪನೆಯನ್ನೂ ಸ್ವತಂತ್ರ ಹಿಂದುಸ್ತಾನದ ರಾಜ್ಯಘಟನೆಯನ್ನು ಸಿದ್ಧಪಡಿಸಲು ಘಟನಾ ಸಮಿತಿ ಸೇರಿಸುವದನ್ನೂ ಸೂಚಿಸಲಾಯಿತು. ನಮಗೆ ಘಟನಾ ಸಮಿತಿ ಸೇರಿಸುವದು ಬೇಕಾದ ಮಾತು. ಈ ವಿಷಯವನ್ನು ಅನುಲಕ್ಷಿಸಿ ಕಾಂಗ್ರೆಸ್ಸು ಈ ಘೋಷಣೆಯನ್ನು ಒಪ್ಪಿಕೊಂಡಿತು.

### ಪಾಕಿಸ್ತಾನದ ಸಮಾಧಿ

ಮೇ ೧೬ ನೇ ತಾರೀಖಿನ ಘೋಷಣೆಯಲ್ಲಿ ಪಾಕಿಸ್ತಾನಕ್ಕೆ ಸಮಾಧಿ ಕೊಟ್ಟಿದ್ದಾರೆ. ಅದರೂ ಮುಸ್ಲಿಂಲೀಗು ಈ ಘೋಷಣೆಯನ್ನು ಸ್ವೀಕರಿಸಿತು. ಈ ಘೋಷಣೆಯಲ್ಲಿ ಇನ್ನೂ ಒಂದು ಮಾತು ಇದೆ. ಯಾವ ಪಕ್ಷವು ದೀರ್ಘಾವಧಿ ಯೋಜನೆಯನ್ನು ಒಪ್ಪಿಕೊಳ್ಳುವದೋ ಆ ಪಕ್ಷವು ನಡುಗಾಲ ಸರಕಾರವನ್ನು ಸ್ಥಾಪಿಸಲು ಅಧಿಕಾರ ಹೊಂದುವದು ಎಂದು ಹೇಳಲಾಗಿದೆ.

ನಡುಗಾಲ ಸರಕಾರ ರಚನೆಯ ಬಗ್ಗೆ ಸಂಧಾನ ನಡೆದಾಗ ಮುಸ್ಲಿಂಲೀಗಿನವರು ಹಿಂದು-ಮುಸ್ಲಿಂ ಸಮಪ್ರಾತಿನಿಧ್ಯ ತತ್ವವನ್ನು ಮುಂದೆ ಚಾಚಿದರು. ಆದರೆ ಕಾಂಗ್ರೆಸು ಇದನ್ನು ವಿರೋಧಿಸಿತು. ಐದು ಹಿಂದೂ ಪ್ರತಿನಿಧಿಗಳು, ಐದು ಮುಸಲ್ಮಾನ ಪ್ರತಿನಿಧಿಗಳು, ಒಬ್ಬ ಕ್ರಿಶ್ಚಿಯನ್, ಒಬ್ಬ ಶೀಖ ಹೀಗೆ ೧೨ ಜನರ ಸರಕಾರ ರಚಿಸಲು ಬ್ಯಾ. ಜಿನ್ನಾರು ಮೊದಮೊದಲು ಒಪ್ಪಿದ್ದರು. ಆದರೆ ಹಿಂದುಸ್ತಾನದ ಮೊದಲನೇ ರಾಷ್ಟ್ರೀಯ ಸರಕಾರದಲ್ಲಿ ಅಲ್ಪಸಂಖ್ಯಾಕರೆಲ್ಲರ ಪ್ರತಿನಿಧಿಗಳೂ ಇರುವದು ಯೋಗ್ಯವೆಂದು ಕಾಂಗ್ರೆಸು ಸೂಚಿಸಿದ್ದರಿಂದ ಮಂತ್ರಿಮಂಡಳದಲ್ಲಿ ೧೪ ಸ್ಥಾನಗಳಾದವು. ಜಿನ್ನಾರು ಲೀಗೇತರ ಮುಸಲ್ಮಾನರನ್ನು ಕಾಂಗ್ರೆಸು ಆರಿಸಕೂಡದೆಂದು ಹಟ ಹಿಡಿದರು. ಜಿನ್ನಾರ ಅಭಿಪ್ರಾಯದಂತೆ ಲೀಗಿನಲ್ಲಿ ಸೇರದ ಮುಸಲ್ಮಾನನು ಮುಸಲ್ಮಾನನೇ ಅಲ್ಲ. ಈ ರೀತಿ ಹಟ ಹಿಡಿದ ಮೂಲಕ ಸಂಧಾನಗಳು ಮುರಿದು ಹೋದವು. ಮೇ ೧೬ ನೇ ತಾರೀಖಿನ ಘೋಷಣೆಯನ್ನು ಲೀಗು ಸ್ವೀಕರಿಸಿದ್ದರಿಂದ ಜಿನ್ನಾರು ತಮಗೆ ನಡುಗಾಲ ಸರಕಾರ ರಚಿಸಲು ಆಮಂತ್ರಣ ಕೊಡುವರೆಂದು ಆಶಿಸಿದ್ದರು. ಆದರೆ ತ್ರಿಮಂತ್ರಿ ಶಿಷ್ಟಮಂಡಳದವರು ಇನ್ನೊಂದು ತಿಂಗಳು ಕಳೆದು ಪುನಃ ನಡುಗಾಲ ಸರಕಾರ ರಚನೆಯ ವಿಷಯದಲ್ಲಿ ಸಂಧಾನ ಪ್ರಾರಂಭಿಸಲಾಗುವದು ಎಂದು ಹೇಳಿ ಲಂಡನಕ್ಕೆ ಹೊರಟು ಹೋದರು.

ಜಿನ್ನಾರು ಮುಂಬಯಿಗೆ ನಿರಾಶರಾಗಿ, ಸಿಟ್ಟಿಗೆದ್ದು ಮರಳಿ ಬಂದರು. ಆದುದರಿಂದ ಈ ಸಿಟ್ಟಿನ ಭರದಲ್ಲಿ ಲೀಗ ಕೌನ್ಸಿಲ ಸಭೆ ಕರೆದು ಮೇ ೧೬ ಮತ್ತು ಜೂನ ೨೫ ನೇ ತಾರೀಖಿನ ಘೋಷಣೆಗಳನ್ನು ಲೀಗು ಈ ಮೊದಲು ಒಪ್ಪಿದ್ದನ್ನು ಹಿಂತೆಗೆದುಕೊಳ್ಳುವ ಮತ್ತು ಪ್ರತ್ಯಕ್ಷ ಹೋರಾಟದ ಗೊತ್ತುವಳಿಯನ್ನು ಪಾಸುಮಾಡಿಸಿದರು.

### ಪ್ರತ್ಯಕ್ಷ ಹೋರಾಟದ ಪರಿಣಾಮ

ಪಾಕಿಸ್ತಾನವನ್ನು ಹಿಂಸೆ, ರಕ್ತಪಾತ ಮತ್ತು ಕತ್ತಿಯ ಬಲದಿಂದ ದೊರಕಿಸುತ್ತೇವೆ. ಎಂದು ಜಿನ್ನಾರು ಹೇಳಿದರು. ಈ ರೀತಿ ರಕ್ತಪಾತ, ಹಿಂಸೆಯಿಂದ ಪಾಕಿಸ್ತಾನ ದೊರಕಿಸುವ ಧೋರಣವು ಸಮಂಜಸವಲ್ಲ. ಇದರ ಪರಿಣಾಮಗಳು ಎಂದೂ ಒಳ್ಳೆಯವಾಗವು. ಪಾಕಿಸ್ತಾನವು ಹಿಂದುಗಳಿಗಾಗಲೀ, ಮುಸಲ್ಮಾನರಿಗಾಗಲೀ, ಇಡೀ ಹಿಂದುಸ್ತಾನಕ್ಕಾಗಲೀ ಕಲ್ಯಾಣಕರವಾದ ಯೋಜನೆಯಲ್ಲವೆಂದು ನಾನು ಸ್ಪಷ್ಟವಾಗಿ ಹೇಳುವೆ.

ಲೀಗು ಕೌನ್ಸಿಲಿನವರು ಅಗಸ್ಟ ೧೬ ನೇ ದಿನವನ್ನು ಪ್ರತ್ಯಕ್ಷ ಹೋರಾಟದ ದಿನವೆಂದು ಸಾರಿದರು. ಹಿಂದುಸ್ತಾನದ ಉಳಿದ ಯಾವದೇ ಭಾಗದಲ್ಲಿ ಏನನ್ನೂ ಮಾಡಲು ಸಾಧ್ಯವಾಗದ ಲೀಗು ಬಂಗಾಲದಲ್ಲಿ ಲೀಗ ಮಂತ್ರಿಮಂಡಳ ಅಧಿಕಾರದಲ್ಲಿರುವದರಿಂದ ಈ ಗೊತ್ತುವಳಿಯನ್ನು ಕಾರ್ಯರೂಪಕ್ಕಿಳಿಸುವ ಹವ್ಯಾಸದಿಂದ ಅಗಸ್ಟ ೧೬ ನೇ ತಾರೀಕು ಸಾರ್ವಜನಿಕ ರಜೆಯ ದಿನವೆಂದು ಘೋಷಿಸಿದರು. ಸಂಪೂರ್ಣವಾದ ಹರತಾಳ ಆಚರಿಸಬೇಕೆಂದೂ ಎಲ್ಲ ವ್ಯವಹಾರವನ್ನು ಅಂದು ನಿಲ್ಲಿಸಬೇಕೆಂದೂ ವಿಧಿಸಲಾಯಿತು. ಸಾರ್ವಜನಿಕರ ಮೇಲೆ ಒತ್ತಾಯ ಮಾಡಿ ಅಂದು ಹರತಾಳ ಪಾಲಿಸಲು ಹಚ್ಚಲಾಯಿತು. ಇಂಥ ಕಾರ್ಯಕ್ರಮದಲ್ಲಿ ಭಾಗವಹಿಸಲು ಇಚ್ಛಿಸದ ಜನರು ಇಂಥ ಸ್ಥಿತಿಯಲ್ಲಿ ಮಾಡತಕ್ಕದ್ದೇನು? ಅವರು ಹರತಾಳ ಪಾಲಿಸಲೊಪ್ಪಲಿಲ್ಲ. ಕಲಕತ್ತೆಯಲ್ಲಿ ಕೊಲೆ, ಸುಲಿಗೆ, ಕೊಳ್ಳಿ ಎಲ್ಲ ಅನನ್ವಿತ ಕೃತ್ಯಗಳ ಗಲಭೆ ಪ್ರಾರಂಭವಾಯಿತು. ೧೯೪೨ ರಲ್ಲಿ ಕಾಂಗ್ರೆಸಿಗರು ಚಲೇಜಾವ ಗೊತ್ತುವಳಿ ಸ್ವೀಕರಿಸಿದಾಗ, ಈ ಗೊತ್ತುವಳಿಯನ್ನು ಕಾರ್ಯರೂಪಕ್ಕಿಳಿಸುವ ಯಾವ ಕಾರ್ಯಕ್ರಮವೂ ಇನ್ನೂ ಸಿದ್ಧವಾಗಿರಲಿಲ್ಲ. ಗಾಂಧೀಜಿಯವರು, ವಾಯಿಸರಾಯರನ್ನು ಕಂಡು ಬಂದ ನಂತರ ಕಾರ್ಯಕ್ರಮ ಸಿದ್ಧಗೊಳಿಸುವ ವಿಚಾರವಿತ್ತು. ಆದರೆ ಅದೆಲ್ಲ ಆಗುವ ಮೊದಲೇ ನಮ್ಮೆಲ್ಲರನ್ನು ಸೆರೆ ಹಿಡಿದು ಜೇಲಿನಲ್ಲಿಡಲಾಯಿತು. ಆದರೆ ಲೀಗಿನಂಥ ಸಂಸ್ಥೆಯು ಗೊತ್ತುವಳಿ ಸ್ವೀಕರಿಸುವದಿಷ್ಟೇ ಅಲ್ಲ, ಅದರಂತೆ ತಮ್ಮ ಕೈಯಲ್ಲಿ ಅಧಿಕಾರವಿರುವ ಬಂಗಾಲ ಪ್ರಾಂತದಲ್ಲಿ ಈ ಗೊತ್ತುವಳಿಯಂತೆ ಕಾರ್ಯ ಆರಂಭಿಸಿದರೂ ಅವರನ್ನಾರು ಸೆರೆ ಹಿಡಿಯಲು ಸಮರ್ಥರು?

### ಜಿನ್ನಾರ ಚಿತ್ತಲಹರಿಯಂತೆ ನಡೆಯಲಾರೆವು

ಬ್ರಿಟಿಷ ಸರಕಾರದವರು ಇತ್ತ ವ್ಹಾಯಿಸರಾಯರಿಗೆ ಕೂಡಲೇ ನಡುಗಾಲ ಸರಕಾರ ರಚಿಸಲು ಕಾಂಗ್ರೆಸಿಗೆ ಆಮಂತ್ರಣ ಕೊಡಲು ಅಪ್ಪಣೆ ಪಿಸಿದರು. ಸೂಚನೆ ಬಂದ ಕೂಡಲೇ ಕಾಂಗ್ರೆಸು ಎಂದಿನಂತೆ ಎಲ್ಲ ಪಕ್ಷಗಳ ಸಹಕಾರ ದೊರಕಿಸಲು ಉತ್ಸುಕವಿದ್ದ ಕಾರಣ ಲೀಗಿನವರಿಗೆ ಸಹಕಾರ ಮಾಡಲು ಬಿನ್ನವಿಸಿತು. ಪಂಡಿತ ಜವಾಹರಲಾಲರು ಸ್ವತಃ ಮುಂಬಯಿಗೆ ಬಂದು ಜಿನ್ನಾರನ್ನು ಕಂಡು ಮಾತಾಡಿದರು. ಆದರೆ ಈ ಬಿನ್ನಹವನ್ನು ಜಿನ್ನಾರು ನಿರಾಕರಿಸಿದರು. ಕಾಂಗ್ರೆಸು ಅಧಿಕಾರ ಸ್ವೀಕರಿಸಿದರೂ ಪಂಡಿತ ಜವಾಹರಲಾಲರು 'ಲೀಗಿನವರು ಸರಕಾರದಲ್ಲಿ ಸೇರುವದಾದರೆ ಯಾವಾಗಲೂ ಬಾಗಿಲು ತೆರೆದಿದೆ. ನಾವು ಇನ್ನೂ ಮೂರು ಸ್ಥಳ ತುಂಬಿಲ್ಲ'ವೆಂದು ಹೇಳಿದರು. ಲೀಗಿನ ಅಧ್ಯಕ್ಷರು ನೆಹರೂರ ಬಿನ್ನಹವನ್ನು ತಿರಸ್ಕರಿಸಿದ್ದರೂ ಹಿತ್ತಲ ಬಾಗಿಲಿನಿಂದ ಲೀಗಿನವರು ಸರಕಾರದಲ್ಲಿ ಇಂದಿಲ್ಲ ನಾಳೆ ಸೇರುವರೆಂದು ನನಗೆ ಮೊದಲಿನಿಂದಲೂ ಗೊತ್ತಿತ್ತು.

### ವಾಯಿಸರಾಯರ ಆಶ್ವಾಸನ

ಲೀಗಿನ ಪ್ರತಿನಿಧಿಗಳು ಸರಕಾರದಲ್ಲಿ ಸೇರುವರೆಂದು ವಾಯಿಸರಾಯರಿಗೆ ಪ್ರತಿನಿಧಿಗಳ ಹೆಸರಿನ ಟಿಪ್ಪಣೆ ಕೊಟ್ಟ ಬಳಿಕ ವಾಯಿಸರಾಯರು 'ಲೀಗು ನಡುಗಾಲ ಸರಕಾರದಲ್ಲಿ ಸೇರಲು ಒಪ್ಪಿದೆ. ಲೀಗು ಘಟನಾ ಸಮಿತಿಯಲ್ಲಿ ಸಹಕಾರ ಮಾಡುವದು. ಲೀಗು ಸರಕಾರದಲ್ಲಿ ಸೇರುವದು ಸಹಕಾರ ಬುದ್ಧಿಯಿಂದಲೇ' ಎಂದು ನಮಗೆ ತಿಳಿಸಿದರು. ಆದರೆ ಘಟನಾ ಸಮಿತಿ ಸೇರುವ ದಿನವನ್ನು ನಿಶ್ಚಿತಗೊಳಿಸುವ ಸಮಯ ಬರಲು ಬ್ಯಾ ಜಿನ್ನಾರು ಅದನ್ನು ಮುಂದೆ ಹಾಕಲು ಸೂಚಿಸಿದರು. ಜಿನ್ನಾರ ಚಿತ್ತಲಹರಿಯಂತೆ ನಮ್ಮ ರಾಷ್ಟ್ರಶಕಟವನ್ನು ನಡೆಯಿಸಲಾರೆವು. ಹೀಗೆ ನಡೆಯುಸುವದಾದರೆ ಹಿಂದುಸ್ತಾನದ ಸ್ವಾತಂತ್ರ್ಯವೇ ಅವರ ಚಿತ್ತಲಹರಿಯನ್ನವಲಂಬಿಸಬಹುದು. ಘಟನಾ ಸಮಿತಿಯಲ್ಲಿ ಲೀಗು ಭಾಗವಹಿಸದಿದ್ದರೆ ಲೀಗಿನ ಪ್ರತಿನಿಧಿಗಳು ನಡುಗಾಲ ಸರಕಾರದಿಂದ ಹೊರಬೀಳಲಿ ಎಂದು ನಾವು ಹೇಳಿಬಿಟ್ಟಿದ್ದೇವೆ.

ಲೀಗಿನ ಅಧ್ಯಕ್ಷರಿಗೆ ಲಂಡನದಲ್ಲಿ ಮಾತುಕತೆ ನಡೆದರೆ ಏನೋ ತಮ್ಮ ಬೇಡಿಕೆಗಳಿಗೆ ಮನ್ನಣೆ ದೊರೆಯಬಹುದೆಂಬಭಾವನೆಇದೆ. ತ್ರಿಮಂತ್ರಿ ಶಿಷ್ಟಮಂಡಳದವರು ಕೊಟ್ಟ ಯೋಜನೆ ಮತ್ತು ಅದಕ್ಕೆ ಕಾಂಗ್ರೆಸು ಒಪ್ಪಿಕೊಂಡದ್ದೇ ಕೊನೆಯನಿರ್ಣಯು

(೧೬ ನೇ ಪುಟ ನೋಡಿರಿ)

## ಮಾನವರೊ? ದಾನವರೊ?

ಬರೆದುದು:– "ತಿರುಮಲೇಶ"
ವಿಶ್ವವಿದ್ಯಾನಿಲಯ, ಮದರಾಸು.

೧.

ಎಲ್ಲಿ ಹಿಂಸೆಯು ತುಳಿದು ನಲುಮೆ ನಲಿದಾಡಿತ್ತೊ!
ಎಲ್ಲಿ ಕ್ರಾಂತಿಯುಸಿರಿದು ಶಾಂತಿ ನೆಲಸಿತ್ತೋ!
ಎಲ್ಲಿ ಸಂಸ್ಕೃತಿ ದೇಶ-ಭಾಷೆಯೊಂದಾಗಿಸಿತೊ!
ಅಲ್ಲಿ ಮತಭೂತ ರಕುತದಲಿ ಮೀಯುತಿದೆ

೨.

ಮತದ ಕಣ ರಕುತದಣುಕಣರಸಿ ಗೋಚರಿಸಿ,
ಧಮನಿಯಲಿ ಹರಿಹರಿದು ಹೃದಯಕಮಲವಸೇರಿ
ಕೋಪತಾಪ ಕಿಚ್ಚಿನುರುಬೆಯಲಿ ಕುದಿಕುದಿಸು,
ಕಂಗಳಲಿ ನುಡಿಯಲ್ಲಿ ನಡೆಯಲ್ಲಿ ಕಾರುತಿದೆ.

೩.

ಎಲ್ಲಿ ವೇದದ ಮಾತು? ಎಲ್ಲಿ ನೀತಿಯ ಬಿತ್ತು?
ಎಲ್ಲಿ ಪಾಪದ ಭೀತಿ? ಎಲ್ಲಿ ದೇಶದ ಪ್ರೀತಿ?
ಎಲ್ಲಿ ಮಾನವಕೀರ್ತಿ? ಎಲ್ಲಿ ಪಶುಸಮವೃತ್ತಿ?
ಎಲ್ಲಿ ಆತ್ಮದ ಶಕ್ತಿ? ಎಲ್ಲಿ ಸುಖಶಾಂತಿ?

೪.

ನರರು ವಾನರರಾಗಿ ವಾನರರು ಮೃಗವಾಗಿ,
ನರಬಲಿಯ ಮಾಟದಲಿ ಪರಹಿಂಸೆಯಾಟದಲಿ,
ತನ್ನ ತಾನರಿಯುವರೆ? ದೇವನಿಗೆ ಹೆದರುವರೆ?
ಮಾನವರೊ? ದಾನವರೊ? ನೆನಸೆ ಮೈನಡಗುತಿದೆ

## ಕಾಗದ ಬಂದಿತು

ಲೇ:— ಪಿ. ತಿ. ಶೀಗೇಹಳ್ಳಿ ಶಿರಶಿ

'ದತ್ತೂ, ನಮ್ಮದೇನಾದರೂ ಇದೆಯೆ?'
'ಇಲ್ಲರೀ'
'ಏ, ನಮ್ಮ ಕಾಗದ ಇದೆಯೇನೋ?'
'ಹ್ಞಾ, ತೆಗೊಳ್ಳಿರೀ'
'ದತ್ತಾ ನಂದು...? ಕಚೆಗಾರ ಬಂದಿದ್ದೆ?'
ನಾಳೆ ಬಂದೀತ್ರೀ. ಇಂದು ನಿಮ್ಮ 'ಜಯಂತಿ' ಬಂದಿದೆ.

ದಿನಾ ಎಲ್ಲರೂ ದತ್ತನನ್ನು ಕೇಳುವವರೇ, ಆತನು ನಗುತ್ತ ಉತ್ತರ ಕೊಡುತ್ತ ಹೋಗುತ್ತಿದ್ದ. ಅವರಲ್ಲಿ ಹಲವರು ಇಂದು ಇದ್ದಿಲ್ಲ. ಇಂದು ದತ್ತ ವಂತಿಗೆ ಎತ್ತಲು ಬಂದಿದ್ದ. ಅಂಚೆ ಸಂಪು ನಡೆದಿತ್ತು ಅದರಲ್ಲಿ ದತ್ತನೂ ಸೇರಿದ್ದ. ಈಗ ಸಂಬಳ ಸಿಗುತ್ತಿರಲಿಲ್ಲ. ಅದಕ್ಕೆ ಅವನು ಉಳಿದ ಅಂಚೆಯಾಳುಗಳೊಂದಿಗೆ ಊರ ಜನರ ಸಹಾಯ ಪಡೆಯಲು ಬಂದಿದ್ದ. "ರಾಯರು ವ್ಯಾಪಾರಕ್ಕೆ ಹೋಗಿದಾರೆ, ಇದೇ ಈಗ ಹೋದ್ರು ಶೆಟ್ರು ಪೇಟೇ ಕಡೆಗೆ, ಹೇಗಡೇರು ಊರೊಳಗೇ ಇಲ್ಲ" ಇದೇ ಅವರಿಗೆ ಹೆಚ್ಚಾಗಿ ಸಿಗುತ್ತಿದ್ದ ಉತ್ತರ. ಹೊರತು ಧನಸಹಾಯವಲ್ಲ.

ದತ್ತ ಅಂಚೆಯಾಳು ಅವನು ಪಡೆಯುತ್ತಿದ್ದ ಸಂಬಳ ಅವನ ಸಂಸಾರಕ್ಕೆ ಸಾಕಾಗುತ್ತಿದ್ದಿಲ್ಲ. ತಲೆಗೆ ಬಂದರೆ ಮೊಳಕಾಲಿಗಿಲ್ಲ; ಮೊಳಕಾಲಿಗೆ ಬಂದರೆ ಕುತ್ತಿಗೆಗೇ ಇಲ್ಲ. ಸಂಸಾರ ಎಂದರೆ ದೊಡ್ಡದಲ್ಲ. ಅವನು—ಹೆಂಡತಿ ಪಾರು, ಮಗಳು ಮಾಲಿ? ಈ ಸಾರೆ ಹೆಂಡತಿಯ ಬಾಣಂತನಕ್ಕೆ ಬಹಳ ಹಣ ಬೇಕಾಯಿತು. ಅದೇ ಅವಳಿಗೆ ಜಡ್ಡಾದುದರಿಂದ ಪಠಾಣನ ಹತ್ತರ ಸಾಲ ಮಾಡಿದ್ದನ್ನು ನೋಡಿದ ಆದರೆ ಅದೂ ತೀರಿಕೊಂಡಿತು. ಈಗ ದುಡಿತವಿದ್ದಿಲ್ಲ. ಸಾಲ ಕೊಟ್ಟ ಪಠಾಣ ದಿನಾ ಮೂರು ಸಾರೆ ಮನೆ ಬಾಗಿಲಿಗೆ ಬರುತ್ತಿದ್ದ. ಹೀಗೆ ಚಿಂತೆ ಅವನನ್ನು ಕೊರೆದು ಸಣ್ಣ ಮಾಡುತ್ತಿತ್ತು.

ದತ್ತು ಅಂದರ್ ಹೈ ಕ್ಯಾ? ಪಠಾಣ ಒದರಿದ. ದತ್ತ ಕಾಣಿಸಿಕೊಂಡ, ಕೊಲೆಗೆ ಸಿದ್ಧವಾದ ಕುರಿಯಂತಾಗಿದ್ದ, ಪಠಾಣ ಕುಡಿದು ಬಂದಿದ್ದ. ಮಾತು ಗುಡುಗಾಗಿತ್ತು. 'ಏ' ಬೇಕೂಫ ಹಮಾರಾ ಪೈಸೆ ದೇತೆನ್ಯೆ ಕ್ಯಾ? ಎಷ್ಟ ದಿನಾ ನಿಮ್ದು ಘರ್ಕ್ಕೊ ಬರ್ತಾ ಇರಬೇಕ್

ಬೇಕೂಫ ........... ಬೇಕೂಫ

ದತ್ತ ಕಿಡಿಕಿಡಿಯಾದ. ಲೇ ಬೇಕೂಫ ಬೋಲ್ತೆ ಕ್ಯಾ? ಭದ್ಮಾಷ್ ಎಂದ.

ಪಠಾಣ ಮುಂದೆ ಬಂದ. ಧಪ್ಪ್, ಧಪ್ಪ್ ಒದ್ದ, ಒದೆತ ಆಯದ ಜಾಗೆಗೆ ಬಿತ್ತು.

ದತ್ತ ಉರುಳಿದ. ತಲೆತಿರುಗಿತು. ಕಣ್ಣು ಮಸಕಾಯಿತು ಹ್ಞೀಕ್, ಹ್ಞೀಕ್...! ಹಾಗೇ ಜೀವಕ್ಕೊ ಮಸುಕು ಕವಿಯಿತು.

ಬೆಳಗಿನ ಹನ್ನೊಂದು ಘಂಟೆ. ಅದೇ ಒಂದು ದಿನಪತ್ರಿಕೆಯೊಂದನ್ನು ಓದುತ್ತಿದ್ದೆ. ಅಂದೇ ಬೆಳಗಿನಿಂದ ಸಂಪು ನಿಂತಿರುವದಾಗಿ ತಿಳಿಯಿತು. 'ಹಾಗಾದರೆ ದತ್ತನೇಕೆ ಇನ್ನೂ ಬರಲಿಲ್ಲ?' ಎಂದು ಕೊಳ್ಳುತ್ತಿದ್ದೆ.

ವಿ. ತಿ. ಹೆಗಡೆ ಎಂದರೆ ನೀವೇ ಏನ್ರೀ? ಧ್ವನಿ ಕೇಳಿಸಿತು.

ಬೇರೊಬ್ಬ!

'ಹೌದು' ಎಂದು ಉತ್ತರ ಕೊಡುವ ಮೊದಲೇ 'ಇಂದು ದತ್ತನೆಲ್ಲಿ ಹೋದನೋ?' ಕೇಳಿದೆ.

ಅವನು ನಾಲ್ಕು ಮಾತುಗಳಲ್ಲಿ ನಡೆದುದೆಲ್ಲವನ್ನೂ ತಿಳಿಸಿ ತನ್ನ ಕೆಲಸ ಮುಗಿಸಿಕೊಂಡು ಹೋದ. ದಿನವೂ ಪ್ರೀತಿಯಿಂದ ಟಪಾಲನ್ನು ತಂದು ಕೊಡುತ್ತಿದ್ದ ದತ್ತ ಇನ್ನು ಇಲ್ಲ. ಆದರೆ ...ನನ್ನ ಕಾಗದ ಇಂದೂ ಬಂದಿತು.





### ಅದಲು ಬದಲು ಅವ್ಯವಹಾರ್ಯ

ಮುಸ್ಲಿಂಲೀಗಿನ ಅಧ್ಯಕ್ಷರಾದ ಬ್ಯಾ. ಜಿನ್ನಾ ಸಾಹೇಬರು ಪಾಕಿಸ್ತಾನ ಪಡೆವ ತಮ್ಮ ಮಹತ್ವಾಕಾಂಕ್ಷೆಯನ್ನೀಡೇರಿಸಿಕೊಳ್ಳುವುದಕ್ಕಾಗಿ ಕ್ಷಣಕ್ಕೊಮ್ಮೆ ತಮ್ಮ ಅವ್ಯವಹಾರ್ಯ ಸೂಚನೆಗಳನ್ನು ಮುಂದೆ ಮಾಡಹತ್ತಿರುವರು. ಮುಸಲ್ಮಾನ ಬಹುಮತ ಪ್ರಾಂತಗಳಲ್ಲಿ ಅಲ್ಪ ಸಂಖ್ಯಾತರ ಹಕ್ಕುಬಾಧ್ಯತೆಗಳ ರಕ್ಷಣೆಯ ಸಂಪೂರ್ಣ ಆಶ್ವಾಸನ ಕೊಡಲಾಗುವದು. ಅವರೇನು ಹೆದರಬೇಕಾಗಿಲ್ಲ ಎಂದು ಜಿನ್ನಾಸಾಹೇಬರು ಮತ್ತು ಮುಸ್ಲಿಂಲೀಗಿನವರು ಅನೇಕ ಸಲ ಹೇಳಿರುವರು. ಈಗ ಲಂಡನದಲ್ಲಿ ರಾಯಟರ ಪ್ರತಿನಿಧಿಗಳಿಗೆ ಕೊಟ್ಟ ಸಂದರ್ಶನದಲ್ಲಿಯೂ ಮುಸ್ಲಿಮರು ಹಿಂದುಗಳಿಗೆ ಸಂರಕ್ಷಣೆಯ ಆಶ್ವಾಸನವನ್ನು ಮೇಲಿಂದ ಮೇಲೆ ಕೊಟ್ಟಿರುವರೆಂದು ಹೇಳಿರುವರು. ಹೀಗೆ ಹೇಳುತಿರುವಾಗಲೆ ಬ್ಯಾ. ಜಿನ್ನಾರು ಹಿಂದು ಮುಸಲ್ಮಾನರನ್ನು ಅದಲು ಬದಲು ಮಾಡುವದವಶ್ಯವಾಗಿದೆಂದು ಹೇಳಿರುವರು. ಪಂಜಾಬ ಸಿಂಧ ಬಂಗಾಲ ಮೊದಲಾದ ಪ್ರಾಂತಗಳಲ್ಲಿಯ ಹಿಂದುಗಳನ್ನು ಹಿಂದು ಬಹುಸಂಖ್ಯಾಕ ಪ್ರಾಂತಗಳಿಗೆ ಕಳಿಸಬೇಕು. ಹಿಂದು ಬಹು ಸಂಖ್ಯಾಕ ಪ್ರಾಂತಗಳಲ್ಲಿಯ ಮುಸಲ್ಮಾನರನ್ನು ಮುಸಲ್ಮಾನ ಬಹುಸಂಖ್ಯಾಕ ಪ್ರಾಂತಗಳಿಗೆ ಕಳಿಸಬೇಕು ಎಂದು ಪ್ರತಿಪಾದಿಸಹತ್ತಿದ್ದಾರೆ. ಹೀಗಾದರೆ ಪಾಕಿಸ್ತಾನ ಹಿಂದುಸ್ತಾನ ಎಂದು ಎರಡು ಪ್ರತ್ಯೇಕರಾಷ್ಟ್ರಗಳಾಗಿ ಎರಡೂ ರಾಷ್ಟ್ರಗಳಲ್ಲಿ ಶಾಂತಿ ನೆಲಿಸುವದೆಂದು ಅವರ ಅಭಿಪ್ರಾಯ. ಅದಾಗುವ ವರೆಗೆ ಹಿಂದುಸ್ತಾನದಲ್ಲಿ ಸದ್ಯದಂಥ ವಿಷಮ ಪರಿಸ್ಥಿತಿ ಉಳಿಯುವದೆಂದೂ ಅವರು ಹೇಳಿರುವರು. ಜಿನ್ನಾಸಾಹೆಬರೆ ಹೀಗೆ ಹೇಳಹತ್ತಿರುವದರಿಂದ ಹುಂಡರ ಹುಂಡಾಟಿಕೆ ನಿಲ್ಲುವುದೆಂತು? ಜನಸಂಖ್ಯೆಯ ಈ ಅದಲು ಬದಲು ಎಷ್ಟೊಂದು ಅವ್ಯವಹಾರ್ಯವಾಗಿದೆಂಬುದು ಎಂಥ ಅಜ್ಞ ಜನರಿಗೂ ಹೊಳೆಯದಿರದು. ನೂರಾರು ವರುಷಗಳಿಂದ ಮನೆ ಮಾರು ಮಾಡಿಕೊಂಡು ಇದ್ದ ಕುಟುಂಬಗಳು ಒಮ್ಮೆಲೆ ಎಲ್ಲವನ್ನು ಬಿಟ್ಟು ಹೊಸ ದೇಶಕ್ಕೆ ಹೋಗುವುದು ಅದೆಂತು ಸಾಧ್ಯ? ಮುಂಬಯಿಯಲ್ಲಿ ಲಕ್ಷಾಂತರ ರೂಪಾಯಿಗಳ ಆಸ್ತಿಯನ್ನು ಮಾಡಿಕೊಂಡಿರುವ ಮುಸಲ್ಮಾನ ವ್ಯಾಪಾರಸ್ಥರು ಇದಕ್ಕೊಪ್ಪುವರೆ? ಸಂಯುಕ್ತಪ್ರಾಂತದಲ್ಲಿಯ ಮುಸಲ್ಮಾನರು ತಮ್ಮ ಜಮೀನದಾರಿಯನ್ನು ಬಿಟ್ಟುಗೊಟ್ಟು ಬೇರೆ ಕಡೆಗೆ ಹೋಗಲು ಸಿದ್ಧರಿರುವರೆ? ನಿಜಾಮಪ್ರಭುಗಳ ಗತಿಯೇನು? ಸಂಸ್ಥಾನದಲ್ಲಿದ್ದ ಮುಸಲ್ಮಾನ ಜಾಗಿರದಾರರು ತಮ್ಮ ಎಲ್ಲ ಜಾಗೀರಗಳ ಮೇಲೆ ತಣ್ಣೀರೆರಚಲು ಸಿದ್ಧರಿರುವರೆ? ಉತ್ತರದಲ್ಲಿದ್ದ ಮುಸಲ್ಮಾನರು ಮತ್ತು ದಾಕ್ಷಿಣಾತ್ಯ ಮುಸಲ್ಮಾನರ ಆಚಾರ, ವಿಚಾರ, ಭಾಷೆ ಮೊದಲಾದವುಗಳಲ್ಲಿ ಎಷ್ಟೊ ವ್ಯತ್ಯಾಸವಿದೆ. ಇಲ್ಲಿಂದ ಉತ್ತರಕ್ಕೆ ಹೋಗಿ ನೆಲೆಸುವ ಮುಸಲ್ಮಾನರಿಗೆ ಪರದೇಶಕ್ಕೆ ಹೋದಂತೆನಿಸುವಲ್ಲಿ ಸಂದೇಹವಿಲ್ಲ. ಹೀಗೆ ಪ್ರಚಾರಮಾಡುವ ಮೊದಲು ಜಿನ್ನಾಸಾಹೇಬರು ತಮ್ಮ ಅನುಯಾಯಿಗಳನ್ನೆಲ್ಲ ಕೇಳಿರುವರೆ? ಈ ಬಗೆಯ ಅವ್ಯವಹಾರ್ಯ ಸೂಚನೆಯಿಂದ ಪರಿಸ್ಥಿತಿ ಎಂದಿಗೂ ಸುಧಾರಿಸದು. ಹಿಂದೂ ಮುಸಲ್ಮಾನರು ಎರಡು ಪ್ರತ್ಯೇಕ ಜನಾಂಗಗಳೆಂಬ ಅಪಪ್ರಚಾರವನ್ನು ಬಿಟ್ಟುಗೊಟ್ಟು ಎಂದಿನಂತೆ ಹಿಂದುಸ್ತಾನದಲ್ಲಿ ವಾಸಿಸುವವರೆಲ್ಲ ಅವರು ಯಾವದೇ ಜಾತಿಯವರಿರಲಿ ಒಂದೇ ಜನಾಂಗದವರು, ಬಾಂಧವರು ಎಲ್ಲರೂ ಸೌಹಾರ್ದದಿಂದ ಇರತಕ್ಕದ್ದು ಎಂಬದಾಗಿ ಜನಸಾಮಾನ್ಯರಲ್ಲೆಲ್ಲ ಪ್ರಚಾರ ಮಾಡುವದರಿಂದಲೆ ಪರಿಸ್ಥಿತಿ ಸುಧಾರಿಸುವುದು.

### ಇಂಗ್ಲಂಡಿನ ಆಶ್ವಾಸನ ನಿರುಪಯುಕ್ತ

ಬ್ರಿಟಿಶ ಸರಕಾರದವರು ಒಡಕ ಹುಟ್ಟಿಸಿ ಆಳುವ ತಮ್ಮ ಧೋರಣವನ್ನು ಇನ್ನೂ ಬಿಟ್ಟುಗೊಟ್ಟಿರುವದಿಲ್ಲ. ಹಿಂದುಸ್ತಾನದಲ್ಲಿ ಹಿಂದೂ-ಮುಸಲ್ಮಾನ ಮೊದಲಾದ ಜಾತಿಯವರಲ್ಲಿ ವೈಮನಸ್ಯ ಬಿದ್ದುದರ ಲಾಭ ಪಡೆಯಲು ಯಾವಾಗಲೂ ಹವಣಿಸುತ್ತಿರುವರು. ಈ ಪರಿಸ್ಥಿತಿಯಲ್ಲಿ ಮುಸ್ಲಿಂಲೀಗಿನವರು ಪಾಕಿಸ್ತಾನದ ಬಗ್ಗೆ ಅವರ ಬೆಂಬಲ ಪಡೆಯಲು ಪ್ರಯತ್ನಿಸುವದು ದೇಶಹಿತ ದೃಷ್ಟಿಯಿಂದ ಅತ್ಯಂತ ವಿಘಾತಕವಾಗಿದೆ. ಪಾಕಿಸ್ತಾನ ವ್ಯವಹಾರ್ಯವಾಗಿದೆಂಬ ಬಗ್ಗೆ ಹಿಂದೂ – ಮುಸಲ್ಮಾನ ಮೊದಲಾದ ಎಲ್ಲಜನರ ವಿಶೇಷತಃ ಪಾಕಿಸ್ತಾನ ಪ್ರದೇಶದಲ್ಲಿದ್ದ ಅಲ್ಪ ಸಂಖ್ಯಾಕರ ಮನವರಿಕೆ ಮಾಡಿಕೊಟ್ಟು ಅವರ ಒಪ್ಪಿಗೆಯಿಂದಲೆ ಪಾಕಿಸ್ತಾನ ಪಡೆಯುವದು ಒಂದು ಬಗೆಯಿಂದ ನ್ಯಾಯವಾದುದು. ಮ. ಗಾಂಧಿ, ಸರದಾರ ವಲ್ಲಭಭಾಯಿ ಪಟೇಲ ಮೊದಲಾದ ಕಾಂಗ್ರೆಸ ಮುಂದಾಳುಗಳು ಈ ಮಾತನ್ನು ಬ್ಯಾ. ಜಿನ್ನಾ ಸಾಹೇಬರಿಗೆ ಈ ಮೊದಲೇ ಹೇಳಿರುವರು; ಈಗಲೂ ಹೇಳುತ್ತಿರುವರು. ಈ ಧೋರಣೆಯನ್ನು ಬಿಟ್ಟುಗೊಟ್ಟು ಕೇವಲ ಬಲುಮೆಯಿಂದ ಮತ್ತು ಬ್ರಿಟಿಶರ ಬೆಂಬಲದಿಂದ ಅದನ್ನು ಪಡೆಯ ಬಯಸುವದು ಯಾವ ರೀತಿಯಿಂದಲೂ ಹಿತಕರವಾಗದು ಪಂಜಾಬ ಬಂಗಾಲಗಳಲ್ಲಿಯ ಮುಸಲ್ಮಾನೇತರರು ಪಾಕಿಸ್ತಾನದ ಬಗ್ಗೆ ಎಷ್ಟೊಂದು ವಿರುದ್ಧ ಇರುವರೆಂಬುದು ಮುಸ್ಲಿಂ ಲೀಗಿಗೆ ಗೊತ್ತಿದೆ. ಸ್ವಯಂ ನಿರ್ಣಯ ತತ್ವವನ್ನು ಪುರಸ್ಕರಿಸುತ್ತಿರುವ ಬ್ಯಾ. ಜಿನ್ನಾರು ಅದು ಕೇವಲ ಮುಸಲ್ಮಾನರಿಗೆ ಮಾತ್ರ ಅನ್ವಯಿಸುವದು. ಮುಸಲ್ಮಾನೇತರರಿಗೆ ಅನ್ವಯಿಸುವದಿಲ್ಲ. ಎಂದು ಹೇಳುತ್ತಿರುವರು. ಅಂದರೆ ಪಂಜಾಬ ಪ್ರಾಂತವನ್ನು ಪಾಕಿಸ್ತಾನದಲ್ಲಿ ಸೇರಿಸಬೇಕೋ ಹೇಗೆಂಬದನ್ನು ನಿರ್ಧರಿಸುವ ಅಧಿಕಾರ ಅಲ್ಲಿನ ಮುಸಲ್ಮಾನೇತರರಿಗೆ ಇಲ್ಲವಂತೆ. ಕೇವಲ ಮುಸಲ್ಮಾನರು ಅದನ್ನು ನಿರ್ಧರಿಸಬೇಕಂತೆ. ಇದೆಲ್ಲಿಯ ನ್ಯಾಯ? ಸ್ವಯಂನಿರ್ಣಯ ತತ್ವ ಎಲ್ಲ ಜಾತಿಯ ಜನರಿಗೂ ಅನ್ವಯಿಸತಕ್ಕದ್ದು. ಈ ರೀತಿ ಪ್ರೌಢರೆಲ್ಲರ ಅಭಿಪ್ರಾಯ ತೆಗೆದುಕೊಂಡು ಅವರ ಒಪ್ಪಿಗೆ ಪಡೆದು ಪಾಕಿಸ್ತಾನವನ್ನು ಸ್ಥಾಪಿಸಲು ಯಾರದೂ ಅಡ್ಡಿಯಿಲ್ಲ. ಅದನ್ನೆಲ್ಲ ಬಿಟ್ಟುಗೊಟ್ಟು ಜನತೆಯನ್ನು ಅದಲು ಬದಲು ಮಾಡುವ ಧೋರಣೆಯಿಂದ ಇಲ್ಲವೆ ದೊಂಬಿಯ ಬೆದರಿಕೆಯಿಂದ ಅಥವಾ ಬ್ರಿಟಿಶರ ಬೆಂಬಲದಿಂದ ಅದನ್ನು ಸ್ಥಾಪಿಸುವ ಪ್ರಯತ್ನ ಮಾಡುವದು ಅವ್ಯವಹಾರ್ಯವಿಷ್ಟೇ ಅಲ್ಲ; ದೇಶದಲ್ಲಿ ಮತ್ತಷ್ಟು ಅಶಾಂತಿಯನ್ನು, ವಿಷಮ ಪರಿಸ್ಥಿತಿಯನ್ನು ಹಬ್ಬಿಸುವದಕ್ಕೆ ಅವಕಾಶಕೊಟ್ಟಂತಾಗುವದು. ಮಮದೋತ ನವಾಬಸಾಹೇಬರು ಜಿನ್ನಾರ ಈ ಅವ್ಯವಹಾರ್ಯ ಅದಲು ಬದಲು ಯೋಜನೆಗೆ ಬೆಂಬಲ ಕೊಡುತ್ತ ಪಂಜಾಬದಲ್ಲಿಯ ಶೀಖರು ಹೊರಗೆ ಹೋಗಬೇಕಿಲ್ಲ. ಹಿಂದುಗಳಷ್ಟೇ ಹೋಗತಕ್ಕದ್ದು ಎಂದು ಹೇಳಿ ಹಿಂದೂ-ಶೀಖರಲ್ಲಿ ಮನಸ್ತಾಪವನ್ನುಂಟು ಮಾಡಲೆಳಸಿದ್ದಾರೆ. ಶೀಖರ ಕೃಪಾಣಕ್ಕೆ ಹೆದರಿ ನವಾಬಸಾಹೇಬರು ಅವರು ತಮ್ಮೊಡನೆ ಇರಲಿ ಎಂದು ಹೇಳಿರುವರೋ ಅಥವಾ ಮತ್ತಾವ ಕಾರಣದಿಂದಲೊ ಎಂಬುದು ಹೇಳಲಿಕ್ಕೆ ಬಾರದಿದ್ದರೂ ಅವರ ಸೂಚನೆ ಮಾತ್ರ ನ್ಯಾಯವಲ್ಲ. ಮುಸ್ಲಿಂ ಲೀಗು ಈ ವಿಘಾತಕ ಧೋರಣವನ್ನು ಬಿಟ್ಟುಗೊಟ್ಟಾಗಲೆ ಹಿಂದುಸ್ತಾನದ ಸಮಸ್ಯೆ ಬಗೆ ಹರಿಯುವದೆಂಬುದು ನಿಃಸಂದಿಗ್ಧವಾಗಿದೆ.



# ಟೀಕೆ-ಟಿಪ್ಪಣೆಗಳು

### ಹಿಂದೀ ಧುರೀಣರೊಡನೆ ಚರ್ಚೆ

ಮುಸ್ಲಿಂಲೀಗಿನವರ ಹಟಮಾರಿತನದ ಧೋರಣದಿಂದ ಹಿಂದೀ ಸ್ವಾತಂತ್ರ್ಯದ ಸಮಸ್ಯೆ ನೆನಗುದಿಗೆ ಬಿದ್ದಿದೆ. ದೀರ್ಘಾವಧಿ ಮತ್ತು ಅಲ್ಪಾವಧಿ ಯೋಜನೆಗಳೆರಡನ್ನೂ ಒಪ್ಪಿಕೊಂಡು ನಡುಗಾಲ ಸರಕಾರದಲ್ಲಿ ಸೇರಿದ ಮುಸ್ಲಿಂ ಲೀಗಿನವರು ಘಟನಾ ಸಮಿತಿಯಲ್ಲಿ ಸೇರಲು ಸಿದ್ಧರಾಗದ್ದರಿಂದ ಬ್ರಿಟಿಶ ಸರಕಾರದವರು ಕಾಂಗ್ರೆಸ್ ಮುಸ್ಲಿಂ ಲೀಗ ಮತ್ತು ಶೀಖ ಧುರೀಣರನ್ನು ಲಂಡನಿಗೆ ಕರೆಯಿಸಿಕೊಂಡು ದುಂಡು ಮೇಜಿನ ಪರಿಷತ್ತನ್ನು ಸೇರಿಸಿರುವರು. ೯ ನೇ ತಾರೀಕಿಗೆ ಘಟನಾ ಸಮಿತಿ ಕೂಡಿಯೇ ತೀರಬೇಕು. ಅಷ್ಟರೊಳಗಾಗಿ ತಿರುಗಿ ಬರಲಿಕ್ಕೆ ಬೇಕು ಎಂಬ ನಿರ್ಧಾರದಿಂದ ಕಾಂಗ್ರೆಸ್ ಧುರೀಣರು ಲಂಡನಿಗೆ ಹೋಗಿರುವರು. ಅಷ್ಟರೊಳಗಾಗಿ ಈ ಮಾತುಕತೆ ಮುಗಿಯಬೇಕಾಗಿದೆ. ಬ್ರಿಟಿಶ ಸರಕಾರದವರು ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಕೊಡಲೇಬೇಕೆಂದು ಗಟ್ಟಿ ಮನಸ್ಸು ಮಾಡಿಕೊಂಡು ಅದರಂತೆ ಕಾರ್ಯಕಲಾಪಗಳನ್ನು ಸಾಗಿಸಿದರೆ ಮುಸ್ಲಿಂಲೀಗಿನ ಅಸಮಂಜಸ ಹಟಮಾರಿತನದ ಧೋರಣೆಗೆ ಅರಿದಾಳ ಬಡೆದಂತಾಗುವದು. ಯಾವ ರಾಷ್ಟ್ರದಲ್ಲಿಯೂ ಎಲ್ಲ ಪಕ್ಷಗಳಲ್ಲಿಯೂ ಒಮ್ಮತವಾಗುವದು ಶಕ್ಯವಿಲ್ಲ. ಕಾಂಗ್ರೆಸಿನವರು ಬಹಿಷ್ಕಾರ ಹಾಕಿದಾಗ ಬ್ರಿಟಿಶ ಸರಕಾರದವರು ಹಿಂದೀ ಸುಧಾರಣೆಗಳನ್ನು ಕಾರ್ಯರೂಪದಲ್ಲಿ ತರಲಿಲ್ಲವೆ? ಯಾವುದೊಂದು ಪಕ್ಷ ನ್ಯಾಯ್ಯ ಕಾರಣಗಳಿಲ್ಲದೆ ಸುಧಾರಣೆಗಳಲ್ಲಿ ಅಡ್ಡಗಾಲು ಹೊಡೆಯಲು ಪ್ರಯತ್ನಿಸಿದರೆ ಅದನ್ನು ಬದಿಗಸರಿಸಿ ಯೋಜನೆಯನ್ನು ಮುಂದೆ ಸಾಗಿಸುವದು ಶಿಷ್ಟಸಾಂಪ್ರದಾಯ. ಈ ಬಗೆಯ ಮನೋವೃತ್ತಿಯಿಂದ ಬ್ರಿಟಿಶ ಸರಕಾರದವರು ಘಟನಾ ಸಮಿತಿಯನ್ನು ಕೂಡಿಸುವುದಾದರೆ ಅದು ಕಾರ್ಯಕಾರಿಯಾಗಬಹುದು. ಮುಸ್ಲಿಂ ಲೀಗಿನವರಿಗೆ ಅವರ ಅಸಮಂಜಸ ಧೋರಣವನ್ನು ಚೆನ್ನಾಗಿ ತಿಳಿಹೇಳುವದು ಅವಶ್ಯ. ಮೊದಲು ಒಪ್ಪಿಕೊಂಡ ಯೋಜನೆಯನ್ನು ಏನೂ ಕಾರಣವಿಲ್ಲದೆ ನಿರಾಕರಿಸುವದು ನ್ಯಾಯ್ಯವಾಗಲಾರದು. ಮುಸ್ಲಿಂ ಲೀಗಿನ ಧುರೀಣರು ಅವರ ಈ ಚಾಂಚಲ್ಯ ವೃತ್ತಿಯನ್ನು ಬಿಟ್ಟುಗೊಡುವಂತೆ ಬ್ರಿಟಿಶ ಪ್ರಮುಖರು ಮನವೊಲಿಸಬೇಕು. ಹಿಂದೀ ಸ್ವಾತಂತ್ರ್ಯ ವಿರೋಧಿ ಗುಂಪುಗಳ ಬೆಂಬಲದ ಆಶ್ವಾಸನದಿಂದ ಅವರು ಈ ರೀತಿ ಅಸಮಂಜಸ ಧೋರಣ ವಹಿಸಿರುವರೆಂಬುದು ಸ್ಪಷ್ಟ ತೋರುವದು ಇದರಿಂದ ದೇಶ ಹಿತ ಮತ್ತು ಜಾತಿ ಹಿತ ಎಂದಿಗೂ ಆಗದೆಂಬುದು ನಿರ್ವಿವಾದವಾಗಿದೆ. ಈ ಮನೋಭೂಮಿಕೆಯಿಂದ ಬ್ರಿಟಿಶ ಸರಕಾರದವರು ಲಂಡನ್ ಪರಿಷತ್ತನ್ನು ನಡೆಸತಕ್ಕದ್ದು. ಮುಸ್ಲಿಂ ಲೀಗಿನವರಾದರೂ ವಿಶಾಲದೃಷ್ಟಿಯವರಾಗಿ ಹಿಂದುಸ್ತಾನದ ರಾಜ್ಯಘಟನೆಯನ್ನು ನಿರ್ಧರಿಸುವದಕ್ಕಾಗಿ ಘಟನಾ ಸಮಿತಿಯಲ್ಲಿ ಸೇರುವ ನಿರ್ಧಾರ ಮಾಡಬೇಕು. ತಾವು ಮೇಲೆ ಹೇಳಿದಂತೆ ಪಾಕಿಸ್ತಾನದ ಬಗ್ಗೆ ಮನವರಿಕೆ ಮಾಡಿಕೊಟ್ಟು ಅದನ್ನು ಪಡೆಯಬೇಕು. ಅದೇ ಮುಸಲ್ಮಾನರಿಗೆ ಮತ್ತು ಇಡೀ ಹಿಂದುಸ್ತಾನಕ್ಕೆ ಹಿತಕರವಾದುದು.

### ಪುನರ್ರಚನಾ ಮಂತ್ರಿಗಳ ಸಂಚಾರ

ಮುಂಬಯಿ ಸರಕಾರದ ಪುನರ್ರಚನಾ ಮಂತ್ರಿಗಳಾದ ಶ್ರೀ ಎಲ್. ಎಂ. ಪಾಟೀಲರು ಇದೇ ೧೦ ನೇ ತಾರೀಕಿನಿಂದ ೧೫ ನೇ ತಾರೀಕಿನ ವರೆಗೆ ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಹೆಯಲ್ಲಿ ಸಂಚರಿಸಲಿರುವರು. ಅವರ ಕಾರ್ಯಕ್ರಮವನ್ನು ಇದೇ ಸಂಚಿಕೆಯಲ್ಲಿ ಬೇರೆಡೆ ಕೊಟ್ಟಿದ್ದೇವೆ. ಮಾನ್ಯ ಮಂತ್ರಿಗಳು ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಹೆಗಳಲ್ಲಿ ಪುನರ್ರಚನಾ ಪರಿಷತ್ತು ಕೂಡಿಸಿ ಆಯಾ ಜಿಲ್ಹೆಗಳಲ್ಲಿ ಕೈಕೊಳ್ಳಬೇಕಾದ ಯುದ್ಧೋತ್ತರ ಯೋಜನೆಗಳ ಬಗ್ಗೆ ವಿಚಾರ ವಿನಿಮಯ ಮಾಡುವರು. ಜೋಡಣೆ ರಸ್ತೆ, ಕೆರೆ, ಬಾವಿ, ದನಗಳ ದವಾಖಾನೆ, ಆಸ್ಪತ್ರೆ, ದನಗಳ ಸಂಗೋಪನ ಕೇಂದ್ರ, ಹೆದ್ದಾರಿ, ಪೂಲು, ಕಾಲುವೆ ಆರೋಗ್ಯಧಾಮ, ಶಾಲೆ ಕಾಲೇಜು, ಒಕ್ಕಲತನ ಪ್ರಯೋಗ ಶಾಲೆ, ನದಿ ಹಾಗುಹಳ್ಳಗಳ ಒಡ್ಡು ಸಾಲೆಗಳ ಕಟ್ಟಡ, ಗ್ರಾಮೋದ್ಯೋಗ ಕೇಂದ್ರ ಮತ್ತು ಫಾರ್ಮ ಮೊದಲಾದ ಅವಶ್ಯಕ ವಿಷಯಗಳ ಬಗ್ಗೆ ಚರ್ಚೆಮಾಡಿ ಆಯಾ ಭಾಗಗಳಲ್ಲಿ ಕೈಕೊಳ್ಳತಕ್ಕ ಯೋಜನೆಗಳನ್ನು ನಿರ್ಧರಿಸಲಾಗುವದು. ಕರ್ನಾಟಕವನ್ನು ಹಿಂದಿನ ಸರಕಾರದವರು ಅಲಕ್ಷಿಸಿದ್ದು ಸರ್ವಶ್ರುತ. ಅಂತೆಯೆ ಈ ಭಾಗವು ಅನೇಕ ವಿಧದಿಂದ ಹಿಂದೆ ಬಿದ್ದಿದೆ. ಇನ್ನು ಮುಂದೆ ಹಾಗಾಗಲಾರದೆಂದು ಸದ್ಯದ ಲೋಕಪ್ರಾತಿನಿಧಿಕ ಮಂತ್ರಿಮಂಡಳ ಆಶ್ವಾಸನ ಕೊಟ್ಟಿದೆ. ಈ ಪರಿಸ್ಥಿತಿಯಲ್ಲಿ ಅಲ್ಲಲ್ಲಿನ ಕಾರ್ಯಕರ್ತರು ತಮ್ಮ ತಮ್ಮ ಭಾಗಗಳಲ್ಲಿ ಕೈಕೊಳ್ಳತಕ್ಕ ಯೋಜನೆಗಳ ರೂಪರೇಷೆಗಳನ್ನು ಗೊತ್ತುಪಡಿಸಿಕೊಂಡು ಅವನ್ನು ಕಾರ್ಯರೂಪದಲ್ಲಿ ತರ್ರುವಂತೆ ಮಂತ್ರಿಗಳಿಗೆ ಬಿನ್ನವಿಸಿಕೊಳ್ಳಬೇಕು. ಇದರಲ್ಲಿ ಕೇವಲ ಸಂಕುಚಿತ ಭಾವನೆಯನ್ನಿಟ್ಟುಕೊಳ್ಳದೆ ಸ್ವಲ್ಪ ವಿಶಾಲ ದೃಷ್ಟಿಯಿಂದ ಮತ್ತು ಹೆಚ್ಚು ಪ್ರಯುಕ್ತತೆಯ ದೃಷ್ಟಿಯಿಂದ ವಿಚಾರ ಮಾಡಬೇಕು. ಅವ್ಯವಹಾರ್ಯ ಯೋಜನೆಗಳನ್ನು ಮುಂದೆ ಮಾಡುವದರಿಂದ ಉದ್ದೇಶ ಸಫಲವಾಗಲಾರದು. ತಮ್ಮ ತಮ್ಮ ಜಿಲ್ಹೆಗಳ ಮತ್ತು ಇಡೀ ಕರ್ನಾಟಕ ಪ್ರಾಂತದ ಅಭಿವೃದ್ಧಿಯ ಧ್ಯೇಯವನ್ನಿಟ್ಟುಕೊಂಡು ಈ ಸಂದರ್ಭದಲ್ಲಿ ವಿಚಾರ ಮಾಡಬೇಕಾಗಿದೆ. ಕೇವಲ ಭಾವನಾವಶರಾಗಿ ಅಥವಾ ಸ್ವಾರ್ಥಪ್ರೇರಿತರಾಗಿ ಯಾವುದೊಂದು ಯೋಜನೆಯನ್ನು ಸ್ವೀಕರಿಸುವುದಾಗಲೀ ನಿರಾಕರಿಸುವುದಾಗಲಿ ನ್ಯಾಯವಾಗಲಾರದು. ಕೇವಲ ಅದರ ಉಪಯುಕ್ತತೆ ಮತ್ತು ಆವಶ್ಯಕತೆಯ ದೃಷ್ಟಿಯಿಂದಲೆ ವಿಚಾರಮಾಡಿ ತಮ್ಮ ಬೇಡಿಕೆಗಳನ್ನು ಸಮಂಜಸ ರೀತಿಯಿಂದ ಮಂತ್ರಿಗಳ ಮುಂದಿರಿಸಬೇಕೆಂದು ಸೂಚಿಸ ಬಯಸುತ್ತೇವೆ.

### ದಕ್ಷಿಣ ಆಫ್ರಿಕೆಯ ಸಮಸ್ಯೆ

ದಕ್ಷಿಣ ಆಫ್ರಿಕೆಯಲ್ಲಿ ಬಿಳಿಯರು ನಡೆಸಿದ ವರ್ಣದ್ವೇಷ ಯುಕ್ತರಾಷ್ಟ್ರ ಸದಸ್ಯರ ಕಿವಿಯ ವರೆಗೆ ಮುಟ್ಟಿ ಅಲ್ಲಿನ ಮುಖ್ಯಮಂತ್ರಿ ಜನರಲ್ ಸ್ಮಟ್ಸರು ಪರಾಜಯ ಹೊಂದಬೇಕಾಯಿತೆಂಬ ಸುದ್ದಿಯನ್ನು ಓದಿ ಹಿಂದೀಯರು ಸಂತುಷ್ಟರಾಗುವಲ್ಲಿ ಸಂದೇಹವಿಲ್ಲ. ಈ ಸಂಬಂಧದ ಸುದ್ದಿಯನ್ನು ಇದೇ ಸಂಚಿಕೆಯಲ್ಲಿ ಬೇರೆ ಕಡೆ ಕೊಟ್ಟಿದ್ದೇವೆ. ಹಿಂದುಸ್ತಾನದ ಈ ಪ್ರಶ್ನೆಯನ್ನು ಎತ್ತಿಹಿಡಿದ ರಾಷ್ಟ್ರಗಳನ್ನೆಲ್ಲ ಮನಃಪೂರ್ವಕವಾಗಿ ಅಭಿನಂದಿಸುವದು ನಮ್ಮ ಕರ್ತವ್ಯವಾಗಿದೆ. ಆದರೆ ಅದೇ ಸಮಯದಲ್ಲಿ ಈ ಗೊತ್ತುವಳಿಗೆ ವಿರುದ್ಧ ಮತಕೊಟ್ಟ ರಾಷ್ಟ್ರಗಳ ಧೋರಣವನ್ನು ನಿಷೇಧಿಸಬೇಕಾಗುವದು. ಬಾಯಿಂದ ಗುಡ್ಡದಂಥ ಮಾತಾಡುವದು ಕೃತಿ ಮಾಡುವ ಸಮಯ ಬಂದಾಗ ಹಿಂದೆ ಸರಿಯುವದು ಯಾವರೀತಿಯಿಂದಲೂ ನ್ಯಾಯ್ಯವಲ್ಲ. ಜಗತ್ತಿನ ರಾಷ್ಟ್ರಗಳಿಗೆಲ್ಲ ಸ್ವಾತಂತ್ರ್ಯ ಸಿಕ್ಕಬೇಕು. ಎಲ್ಲರೂ ಸಮಾನರು, ಎಲ್ಲ ರಾಷ್ಟ್ರಗಳಿಗೂ ಸಮಾನಹಕ್ಕುಬಾಧ್ಯತೆಗಳಿವೆಂದು ಹೇಳುತಿರುವಾಗಲೆ ತಮ್ಮ ಅಧೀನದಲ್ಲಿದ್ದ ಜನಾಂಗಗಳ ಹಕ್ಕುಬಾಧ್ಯತೆಗಳನ್ನು ಹತ್ತಿಕ್ಕುವದು ನ್ಯಾಯ್ಯವಾಗಲಾರದು. ಅಮೇರಿಕನ್ ಸರಕಾರ ಈ ಸಮಯದಲ್ಲಿ ವಿರುದ್ಧ ಮತ ಕೊಟ್ಟದ್ದು ನಿಷೇಧಾರ್ಹವಾಗಿದೆ. ತಮ್ಮಲ್ಲಿಯ ನಿಗ್ರೋ ಸಮಸ್ಯೆಯನ್ನು ಬಿಡಿಸಲಣಿಯಾದ ಅಮೇರಿಕನ್‌ರು ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರನ್ನು ಹತ್ತಿಕ್ಕಲು ಅವಕಾಶ ಕೊಡುವದು ಸಮಂಜಸವೆ? ಬ್ರಿಟಿಶ ಸರಕಾರದ ಹಸ್ತಕರೂ ಈ ಗೊತ್ತುವಳಿಗೆ ವಿರುದ್ಧ ಮತ ಕೊಟ್ಟದ್ದು ನ್ಯಾಯ್ಯವಲ್ಲ. ಕೇವಲ ತಮ್ಮವರ ಸ್ವಾರ್ಥಕ್ಕಾಗಿ ಅವರು ಹಾಗೆ ಮಾಡಿರುವರೆಂಬುದು ಸ್ಪಷ್ಟವಿದೆ. ಅದೇನೇ ಇದ್ದರೂ ಜಾಗತಿಕ ಶಾಂತಿ ಸಮಾನತೆಯನ್ನು ಸ್ಥಾಪಿಸಹೊರಟಿರುವ ಈ ಪ್ರಮುಖ ರಾಷ್ಟ್ರಗಳು ಇಂತು ಆಕ್ಷೇಪಾರ್ಹ ಧೋರಣ ಸ್ವೀಕರಿಸಿದ್ದು ಖಂಡನೀಯವೇ ಸೈ. ಹಿಂದೀಯರಿಗೆ ದೊರೆತ ಈ ವಿಜಯ ನಿರ್ಧಾರಕವಲ್ಲ; ಇನ್ನು ಮುಂದೆ ಕೂಡತಕ್ಕ ಯುಕ್ತರಾಷ್ಟ್ರ ಮಹಾಸಭೆಯಲ್ಲಿ ಇದು ಅಂಗೀಕೃತವಾಗಬೇಕಾಗುವದು. ಅದೂ ಎರಡು ಮೂರಾಂಶ ಮತಗಳಿಂದ. ಮೇಲೆ ಹೇಳಿದ ಪ್ರಬಲ ರಾಷ್ಟ್ರಗಳ ಬೆಂಬಲ ಕೊಟ್ಟಾಗಲೆ ಸ್ವೀಕೃತವಾಗಬಲ್ಲದು. ಆದುದರಿಂದ ಈಗ ವಿರುದ್ಧ ಮತ ಕೊಟ್ಟ, ಇಲ್ಲವೆ ತಟಸ್ಥ ಉಳಿದ ಯುಕ್ತರಾಷ್ಟ್ರ ಸದಸ್ಯರು ತಮ್ಮ ತಪ್ಪನ್ನು ತಿಳಿದುಕೊಂಡು ಅದನ್ನು ಸುಧಾರಿಸಿಕೊಳ್ಳಬೇಕು. ಅಂದರೇನೇ ಯುಕ್ತರಾಷ್ಟ್ರ ಸಂಘಕ್ಕೆ ಅವರು ಗೌರವವನ್ನು ತಂದಂತಾಗುವದು. ಆದರೂ ಈಗ ಸಿಕ್ಕ ವಿಜಯ ನೈತಿಕ ವಿಜಯವಾಗಿದ್ದು ಇದಕ್ಕಾಗಿ ಪಂಡಿತ ವಿಜಯಲಕ್ಷ್ಮಿಯವರನ್ನು ಮತ್ತು ಅವರ ಸಹಕಾರಿಗಳನ್ನು ಅಭಿನಂದಿಸುತ್ತೇವೆ. ಮುಂದಿನ ಕಾರ್ಯದಲ್ಲಿಯೂ ಅವರಿಗೆ ಯಶಸ್ಸು ಸಿಕ್ಕಲೆಂದು ಹಾರೈಸುತ್ತೇವೆ.

# ಲಂಡನದಲ್ಲಿ ನೆಹರು, ಜಿನ್ನಾ, ಬಲದೇವ, ಲಿಯಾಕತ

## ಹಿಂದೀ ಬಿಕ್ಕಟ್ಟು ಬಿಡಿಸುವ ವಿಶ್ವಪ್ರಯತ್ನ. ಜಿನ್ನಾರಿಗೆ ಬೇಕಾದುದೇನು? — ಬಂಗಾಲದಲ್ಲಿ ಮಹಾತ್ಮರ ಶಾಂತಿಪ್ರಯತ್ನ

ಜಿನ್ನಾರು ಘಟನಾ ಸಮಿತಿಯನ್ನು ಬಹಿಷ್ಕರಿಸಲು ಮಾಡಿದ ನಿರ್ಧಾರದಿಂದುಂಟಾದ ಬಿಕ್ಕಟ್ಟನ್ನು ಬಗೆ ಹರಿಸಲೆಂದು ಬ್ರಿಟಿಶ ಸರಕಾರದವರು ಕರೆದ ಕಾಂಗ್ರೆಸ್-ಲೀಗ- ವಾಯಿಸರಾಯ ದುಂಡುಮೇಜಿನ ಪರಿಷತ್ತಿನ ಆಮಂತ್ರಣವನ್ನು ನಿರಾಕರಿಸಲು ಕಾಂಗ್ರೆಸ್ಸು ನಿರ್ಧರಿಸಿದ್ದರೂ ಈ ಬಿಕ್ಕಟ್ಟಿನೊಳಗಿನ ಬಿಕ್ಕಟ್ಟನ್ನು ಬ್ರಿಟಿಶ ಮುಖ್ಯ ಮಂತ್ರಿ ಆ್ಯಟ್ಲಿಯವರ ವಿಶೇಷ ಅನುರೋಧ ಪರಿಹರಿಸಿತೆಂದು ಹೇಳಬೇಕು. ಆದುದರಿಂದ ಕಾಂಗ್ರೆಸ್ಸಿನ ಪರವಾಗಿ ಕೇವಲ ಪಂಡಿತ ಜವಾಹರರೊಬ್ಬರೇ ಹಾಗು ಶೀಖರ ಪರವಾಗಿ ಸರದಾರ ಬಲದೇವ ಸಿಂಗರು ಇಂಗ್ಲಂಡಿಗೆ ಕಳೆದ ವಾರಾಂತ್ಯದಲ್ಲಿ ಪ್ರಯಾಣ ಬೆಳೆಸಿದರು. ಇಂಗ್ಲಂಡಿನ ಮುಖ್ಯಮಂತ್ರಿ ಆ್ಯಟ್ಲಿಯವರೂ ಭಾರತಮಂತ್ರಿ ಪೆಥಿಕ್ ಲಾರೆನ್ಸರೂ ಈಗಾಗಲೆ ಉಭಯ ಪಕ್ಷದವರಲ್ಲಿ ಮಾತುಕತೆ ನಡೆಸಿದ್ದರೂ ಇನ್ನೂ ಒಪ್ಪಂದದ ಆಶೆ ಕಾಣಿಸಿಲ್ಲವೆಂದು ಹೇಳಲಾಗಿದೆ. ಆದರೆ ಈಗ ನಡೆದುದು ಪೂರ್ವ ಪೀಠಿಕೆಯ ಚರ್ಚೆಯಾಗಿದ್ದು ಇದನ್ನು ಬರೆಯುತ್ತಿರುವಾಗ ಸೇರಿರುವ "ಪಕ್ಕಾ" ಸಭೆಯಲ್ಲಿ ಆಶಾಕಿರಣ ಮಿಂಚಬಹುದೆಂದು ಆಶಿಸಲಾಗಿದೆ.

### ಇಬ್ಬರನ್ನೂ ಸಂತುಷ್ಟಗೊಳಿಸಿದ ಆಮಂತ್ರಣ

ಹಿಂದೀ ಸಮಸ್ಯೆಯನ್ನು ಬಗೆ ಹರಿಸುವ ಆತುರದಲ್ಲಿ ಬ್ರಿಟಿಶ ಮುಖ್ಯಮಂತ್ರಿಗಳು ಉಭಯ ಪಕ್ಷಗಳಿಗೂ ಪರಸ್ಪರ ವಿರುದ್ಧ ಆಶ್ವಾಸನವನ್ನು ಕೊಟ್ಟಿದ್ದಾರೆಂದು ಹೇಳಬಹುದು. ಜಿನ್ನಾ ಸಾಹೇಬರು ಮೊದಲಿನಿಂದಲೂ "ಆಮಂತ್ರಣ ಬಂದರೆ" ಸಮಾಚಾರವನ್ನು ಚರ್ಚಿಸಲು ಇಂಗ್ಲಂಡಿಗೆ ಹೋಗಲುಸಿದ್ಧರಾಗಿಯೇ ಇದ್ದರು. ಆದರೆ ಕಾಂಗ್ರೆಸ್ಸು ತನಗಲ್ಲೇನೂ ಕೆಲಸವಿಲ್ಲೆಂದು ಆಮಂತ್ರಣವನ್ನು ನಿರಾಕರಿಸಿಬಿಟ್ಟಿತು. ಪಂಡಿತ ಜವಾಹರಲಾಲರು ತಾ. ೨೬ ಕ್ಕೆ ವಾಯಿಸರಾಯರಿಗೆ ಬರೆದ ಪತ್ರದಲ್ಲಿ "ಬ್ರಿಟಿಶ ಮಂತ್ರಿ ಶಿಷ್ಟಮಂಡಲ ಇಲ್ಲಿದ್ದಾಗ ಅಂಗೀಕರಿಸಿದ ಅನೇಕ ನಿರ್ಣಯಗಳನ್ನು ಮೊದಲಿನಿಂದ ವಿಚಾರಿಸುವದೇ ಈ ಸಭೆಯ ಉದ್ದೇಶವೆಂದು ನಮಗನಿಸುತ್ತದೆ. ...ಹಿಂದೀ ಸಮಸ್ಯೆ ಬಗೆಹರಿಸಲ್ಪಟ್ಟಿದೆಯೆಂದು ನಮಗನಿಸಿದ್ದರಿಂದಲೇ ನಿಶ್ಚಿತ ದಿನಕ್ಕೆ ಘಟನಾ ಸಮಿತಿಯನ್ನು ಕೂಡಿಸಲೇಬೇಕೆಂದು ನಾವು ಒತ್ತಿ ಹೇಳಬೇಕಾಯಿತು ... ಮುಸ್ಲಿಂ ಲೀಗು ಮೇ ೧೬ ರ ಘೋಷಣೆಯನ್ನು ಅಂಗೀಕರಿಸಿಯೇ ನಡುಗಾಲ ಸರಕಾರದಲ್ಲಿ ಸೇರಿದೆಯೆಂಬದು ಸ್ಪಷ್ಟವಿದೆ. ಈಗ ಘಟನಾ ಸಮಿತಿಯಲ್ಲಿ ಸೇರುವದಿಲ್ಲವೆಂದು ಲೀಗು ಪ್ರಕಟಿಸಿದೆ. ನಾವೀಗ ಇಂಗ್ಲಂಡಿಗೆ ಹೊರಟರೆ ಯೋಜನೆಯನ್ನು ಆಮೂಲಾಗ್ರ ಬದಲಿಸಲಾಗುವದು,ಮತ್ತು ಅದಕ್ಕೆ ಒಪ್ಪಿಗೆ ಕೊಡಲು ಕಾಂಗ್ರೆಸ್ಸಿಗರು ಹೋಗುತ್ತಿದ್ದಾರೆಂದು ಜನರು ಆಡಿಕೊಳ್ಳುವರು. ಆದರಿಂದ ಭಯಂಕರ ಪರಿಣಾಮವಾಗುವದು" ಎಂದು ಭಯ ವ್ಯಕ್ತಗೊಳಿಸಿದ್ದರು. ಇದಕ್ಕೆ "ಘಟನಾ ಸಮಿತಿ ಡಿಸೆಂಬರ ೯ ಕ್ಕೆ ನಿರಾತಂಕವಾಗಿ ಸೇರಿಸಿ, ಕಾರ್ಯಪ್ರವೃತ್ತವಾಗುವಂತೆ ಮಾಡುವದೇ ಸಭೆಯ ಉದ್ದೇಶ... ಘಟನಾ ಸಮಿತಿಯನ್ನು ಮುಂದೂಡುವದಾಗಲಿ ಬ್ರಿಟಿಶ ಯೋಜನೆಯನ್ನು ತ್ಯಜಿಸುವದಾಗಲಿ ನಮ್ಮ ಇಚ್ಛೆಯಿಲ್ಲ" ಎಂದು ಆಟ್ಲಿಯವರ ಆಶ್ವಾಸನ ಬಂತು. (ತಾ. ೨೭). ಆದರೂ ಜವಾಹರರು ತಾ. ೨೮ ಕ್ಕೆ ಮರಳಿ ಕಳಿಸಿದ ಉತ್ತರದಲ್ಲಿ ತಾವು ಲಂಡನ್ನಿಗೆ ಬರುವದೇ ಅವಶ್ಯವಿಲ್ಲವೆಂದು ಸಾಧಿಸುತ್ತ "ಬ್ರಿಟಿಶ ಘೋಷಣೆಯನ್ನು ನಾವು ಸಂಪೂರ್ಣ ಒಪ್ಪಿದ್ದೇವೆ... ಅರ್ಥ ಮಾಡುವದರಲ್ಲಿ ಭಿನ್ನಾಭಿಪ್ರಾಯವಾದರೆ ಫೆಡರಲ್ ಕೋರ್ಟಿನ ನಿರ್ಣಯದಂತೆ ನಡೆದುಕೊಳ್ಳಲು ಸಿದ್ಧರಿದ್ದೇವೆ...ನಮ್ಮ ನಿಲುಮೆ ಸ್ಪಷ್ಟವಾಗಿದೆ." ಎಂದು ಹೇಳಿದ್ದರು. ಕಾಂಗ್ರೆಸ್ ನಿಲುಮೆ ತಮಗೆ ಸಂಪೂರ್ಣ ವಿದಿತವಾಗಿದೆ. ಆದರೂ ನೀವು ಬರಬೇಕೆಂದು ಆಟ್ಲಿಯವರು ಆಗ್ರಹ ತೊಟ್ಟದ್ದರಿಂದ ಕಾಂಗ್ರೆಸ್ಸು ಆಮಂತ್ರಣ ಸ್ವೀಕರಿಸಿತು. ಯೋಜನೆಯಲ್ಲಿ ಹೆಚ್ಚು ಕಡಿಮೆ ಮಾಡುವದಿಲ್ಲೆಂಬ ಭರವಸೆ ದೊರೆತ ನಂತರವೇ ಲಂಡನ್ನಿಗೆ ಹೋಗುವ ನಿರ್ಣಯ ಮಾಡಲ್ಪಟ್ಟಿತು. ಆದರೆ ಕಾಂಗ್ರೆಸ್ಸಿಗೆ ಕೊಟ್ಟ ಭರವಸೆಯನ್ನು ಕೇಳಿ ಜಿನ್ನಾರು ಉರಿದೆದ್ದರು. ಇದರಿಂದ ಇಡಿ ಭೂಮಿಕೆಯೆ ಬದಲಿಸಿದ್ದರಿಂದ "ಜವಾಹರರಿಗೆ ಸೂಚಿಸಿದ ವಿಷಯಗಳನ್ನಷ್ಟೆ ಚರ್ಚಿಸಲು ನಾವು ಸಿದ್ಧರಿಲ್ಲ. ಪೂರ್ಣ ಪರಿಸ್ಥಿತಿಯನ್ನು ವಿಚಾರಣೆಗೆ ತೆಗೆದುಕೊಳ್ಳದಿದ್ದರೆ ನಾವು ಬಂದು ಫಲವಿಲ್ಲ" ಎಂದು ತಂತಿ ಕಳಿಸಿದರು. "ರಾಮಾಯ ಸ್ವಸ್ತಿ, ರಾವಣಾಯ ಸ್ವಸ್ತಿ" ಎಂಬ ಬಗೆಯಲ್ಲಿ ಆಟ್ಲಿಯವರು "ಎಲ್ಲ ವಿಷಯಗಳನ್ನೂ, ವಿಚಾರಿಸಲು ಯಾವ ಆತಂಕವೂ ಇಲ್ಲ" ಎಂದು ಉತ್ತರಕೊಟ್ಟರು. ಅದು ಜಿನ್ನಾರನ್ನು ತೃಪ್ತಿಗೊಳಿಸಿತು!

### ಸಮಸ್ಯೆಯ ಸ್ವರೂಪ

ಜಿನ್ನಾ ಸಾಹೇಬರು ಪಾಕಿಸ್ತಾನವನ್ನು ಸಮಾಧಿಯಿಂದೆತ್ತಿ ಪುನಃ ಹೊರಗೆ ತಂದು ಅದರ ಹೆಸರಲ್ಲಿ ಕೂಗತೊಡಗಿದ್ದರೂ ಇಡಿ ರಾಜಕೀಯ ಪ್ರಶ್ನೆಯನ್ನೆ ಪುನಃ ವಿಚಾರಿಸಬೇಕೆಂಬದಾಗಿ ಹಟತೊಟ್ಟಿದ್ದರೂ ಅದೆಲ್ಲದರ ಉದ್ದೇಶ ಬ್ರಿಟಿಶ ಯೋಜನೆಯಲ್ಲಿ, ಸಂದಿಗ್ಧವಾಗಿದ್ದು ಸಂಭವತಃ ತಮಗೆ ಒಲ್ಲದ ಬಗೆಯಲ್ಲಿ ನಿರ್ಣಯಗೊಳ್ಳಬಹುದಾದ ಸಂಗತಿಗಳಿಗೆ ತಮಗನುಕೂಲವಾದ ನಿಸ್ಸಂದಿಗ್ಧವ್ಯಾಖ್ಯಾನವನ್ನು ಮೊದಲೇ ಬ್ರಿಟಿಶ ಸರಕಾರ ಒಪ್ಪುವಂತೆ ಮಾಡುವದಾಗಿದೆಯೆನ್ನಬಹುದು. ಅಶಾಂತಿ, ದಂಗೆ ಅಂತಸ್ಯುದ್ಧ ಮೊದಲಾದ ಬೆದರಿಕೆಗಳನ್ನು ಹಾಕಿ ಅವರು ಬ್ರಿಟಿಶರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇಕೆಂದಿದ್ದಾರೆ. "ಪಾಕಿಸ್ತಾನದ ಬೀಜ" ಎದರಲ್ಲಿದೆಯೆಂದು ಬಗೆದಿದ್ದರೋ ಆ ಗುಂಪುಗಳ ರಚನೆಯ ವಿಷಯವೇ ಶಿಥಿಲ ಶಬ್ದಗಳಲ್ಲಿ ಉಲ್ಲೇಖಿಸಲ್ಪಟ್ಟದ್ದು ಕೊನೆಗೂಅದು ರೂಪಗೊಳ್ಳದಿರಬಹುದೆಂಬ ಜಿನ್ನಾರಭೀತಿಯೇ ಅವರ ಎಲ್ಲ ಬೊಬ್ಬಾಟಕ್ಕೆ ಮೂಲ. ಘಟನೆ ಸಿದ್ಧವಾದ ನಂತರ ಹೊಸದಾಗಿ ಆರಿಸಲ್ಪಟ್ಟ ಪ್ರಾಂತಿಕ ಶಾಸನ ಸಭೆಯಲ್ಲಿ ಗುಂಪಿನಿಂದ ಹೊರಬಿದ್ದು ಹೋಗಲು ನಿರ್ಣಯಿಸುವ ಹಕ್ಕು ಪ್ರಾಂತಗಳಿದ್ದುದೇ ಸಾಕಷ್ಟು ಅಪ್ರಿಯವಾಗಿತ್ತು ಅವರಿಗೆ. ಅದಲ್ಲದೆ ಪ್ರಾರಂಭದಶೆಯಲ್ಲೇ ಗುಂಪನ್ನು ಗಾಳಿಗೆ ತೂರಿಬಿಡುವ ವಿಚಾರದಲ್ಲಿ ಪಾಕಿಸ್ತಾನ ವಿರೋಧಿಗಳಿರುವದು ಅವರನ್ನು ಮತ್ತಷ್ಟು ಎದೆಗೆಡಿಸಿದೆ. ಗುಂಪಿನ ವಿಷಯದಲ್ಲಿ ಮಂತ್ರಿತ್ರಯ ಯೋಜನೆ ಹೇಳುವದಿದು:-"ಪ್ರಾಂತಗಳಿಗೆ ಗುಂಪುಗಳನ್ನು ಕಟ್ಟಿಕೊಳ್ಳುವ ಸ್ವಾತಂತ್ರ್ಯವಿದೆ" ಗುಂಪು ಕಟ್ಟಿಕೊಳ್ಳುವ ಸ್ವಾತಂತ್ರ್ಯವೆಂದರೆ ಕಟ್ಟಿಕೊಳ್ಳದಿರುವ ಸ್ವಾತಂತ್ರ್ಯವೂ ಇದೆಯೆಂದರ್ಥವಾಯಿತು. ಈಗ ಗುಂಪು ಕಟ್ಟಿಕೊಳ್ಳಬೇಕೋ ಬೇಡವೋ ಎಂಬ ನಿಶ್ಚಯ ಮಾಡುವ ಹಕ್ಕು ಯಾರದು? ಇಲ್ಲೀಗ ಬರುವದು ಸಂದಿಗ್ಧತೆ. ಮತದಾನ ಮಾಡುವಾಗ ಆ ಯಾ ಪ್ರಾಂತದಪ್ರತಿನಿಧಿಗಳ ಪ್ರತಿಪ್ರತ್ಯೇಕ ಬಹುಮತ ಬೇಕೆ? ಅಥವಾ ಗುಂಪಿನಲ್ಲಿ ಸೇರುವ ಎಲ್ಲ ಸದಸ್ಯರು ಒಟ್ಟಾಗಿ ಮತದಾನ ಮಾಡಿ ಬಹುಮತ ದೊರೆಯಬೇಕೆ? ಎಲ್ಲ ಸದಸ್ಯರು ಒಟ್ಟು ಮತದಾನಮಾಡಿ ಅದರಲ್ಲಿ ಬಹುಮತ ದೊರೆಯಬೇಕೆಂದಾದರೆ ಆಗ ಜಿನ್ನಾರ ಪಾಕಿಸ್ತಾನದ ಬೀಜ ಬಿತ್ತಿದಂತಾಯಿತು. ಏಕೆಂದರೆ, (ಬ) ಗುಂಪಿನ (ಪಂಜಾಬ, ಸಿಂಧ, ಗಡಿನಾಡು)ಲ್ಲಿಯೂ (ಕ) ಗುಂಪಿನಲ್ಲಿಯೂ (ಬಂಗಾಲ ಆಸಾಮು) ಒಟ್ಟು ಲೀಗ್ ಪ್ರತಿನಿಧಿಗಳದೇ ಬಹುಮತವಿದೆ. ಆದರೆ ಪ್ರಾಂತಗಳು ಪ್ರತ್ಯೇಕ ಪ್ರತ್ಯೇಕವಾಗಿ ಮತವಿತ್ತರೆ (ಕ) ಗುಂಪನ್ನು ಆಸಾಮುವೂ (ಬ) ಗುಂಪನ್ನು ಗಡಿನಾಡೂ ವಿರೋಧಿಸುವದರಿಂದ ಗುಂಪುಗಳೇ ಅಸಾಧ್ಯವಾಗಿ ಬಿಡುವವು. ಆದರೆ ಯೋಜನೆಯಲ್ಲಿ "ಪ್ರಾಂತಗಳಿಗೆ" "ಸ್ವಾತಂತ್ರ್ಯ" ಹೇಳಲ್ಪಟ್ಟಿರುವದರಿಂದ ಕಾಂಗ್ರೆಸ್ಸಿನ ಅರ್ಥವೇ ನ್ಯಾಯಸ್ಥಾನದಲ್ಲಿ ಗೆದೆಯಬಹುದೆಂದು ವಕೀಲ ಜಿನ್ನಾ ಸಾಹೇಬರಿಗೆ ಹೆದರಿಕೆಯಾಗಿದೆ. ಆದರಿಂದ ಅವರ ಪಾಕಿಸ್ತಾನ ಕೇವಲ ಬಂಗಾಲ ಮತ್ತು ಸಿಂಧ ಪಂಜಾಬಗಳಿಗೆ ಸೀಮಿತವಾಗಿ ಪಾಕಿಸ್ತಾನೇತರ ಪ್ರಾಂತಗಳ ನಡುವೆ ಸಿಕ್ಕಿಕೊಳ್ಳುವದು.

### ಮುಂದೇನು?

ಆದುದರಿಂದ ಈ ಪ್ರಶ್ನೆಯ ನಿರ್ಣಯದಲ್ಲಿ ಪಾಕಿಸ್ತಾನದ ಹುಟ್ಟು-ಸಾವುಗಳು ಪಣವಾಗಿವೆ. ಲಂಡನ್ನಿಗೆ ಹೋಗಿರುವ ನಮ್ಮ ಮುಂದಾಳುಗಳಿಗೆ ಯೋಗ್ಯ ಆತಿಥ್ಯ ನಡೆಯುತ್ತಿದೆ. ಒಂದು ಕ್ಷಣ "ಊಡ ಅಪನ್ಯಯವಾಗದಂತೆ ಬ್ರಿಟಿಶ ಮಂತ್ರಿಗಳು ವಿಚಾರ ವಿನಿಮಯ ನಡೆಸಿ ಪ್ರಯತ್ನಿಸುತಿದ್ದಾರೆ. ಹಿಂದೀ ಮುಂದಾಳುಗಳಿಗೆ ಅವರವರ ಅನುಯಾಯಿಗಳು ಗೌರವ, ಹೂಮಾಲೆಗಳನ್ನರ್ಪಿಸುತ್ತಿದ್ದಾರೆ. "ಪಾಕಿಸ್ತಾನ!" "ಏಕೀಕೃತ ಭಾರತ!" ದ ಪರಸ್ಪರ ವಿರುದ್ಧ ಕೂಗುಗಳು ಅವರು ಲಂಡನ್ನಿನಲ್ಲಿ ಬಂದಿಳಿದೊಡನೆ ಕೇಳಿಬಂದವು. ಆದರೆ ಇವೆಲ್ಲದರಿಂದ ಯಾವುದಾದರೊಂದು ಉಭಯ ಸಮ್ಮತ ನಿರ್ಣಯವಾಗುವ ಸಂಭವವುಂಟೆ? ಹಿಂದೀ ಮುಂದಾಳುಗಳು ಈ ಐತಿಹಾಸಿಕ ಸುಸಂಧಿಯನ್ನು ಕಳೆದುಕೊಳ್ಳದೆ ಔದಾರ್ಯದಿಂದ ಈ ಮತಭೇದವನ್ನು ಬಗೆಹರಿಸಬೇಕೆಂದೇನೋ ಬ್ರಿಟಿಶ ಪತ್ರಿಕೆಗಳು ಆಶಿಸುತ್ತವೆ. ಕೆಲವಂತೂ ಕಾಂಗ್ರೆಸ್ಸು ಲೀಗ್ ದೃಷ್ಟಿಕೋಣಕ್ಕೆ ಮನ್ನಣೆ ಕೊಡಬೇಕು; ಇಲ್ಲದಿದ್ದರೆ ಅನಿವಾರ್ಯವಾಗಿ ಬ್ರಿಟಿಶರು ಅಧಿಕಾರ ಬಿಟ್ಟುಕೊಡುವದನ್ನು ಮುಂದೆ ಹಾಕಬೇಕಾಗುವದೆಂದು ಹೆದರಿಸಲೂ ಹಿಂಜರಿದಿಲ್ಲ. ಅಮೇರಿಕನ್ ವಿದೇಶ ಖಾತೆಯ ಆಚಿಸೆನ್ನರೂ ಹಿಂದೀ ಮುಂದಾಳುಗಳು ತಮ್ಮೊಳಗಿನ ಭೇದಗಳನ್ನು ಬಗೆಹರಿಸಿಕೊಳ್ಳಬೇಕೆಂದು ವಿನಂತಿ ಮಾಡಿಕೊಂಡಿದ್ದಾರೆ. ಕಾಯರೋದಲ್ಲಿಳಿದಾಗ ಜಿನ್ನಾರು "ಪಾಕಿಸ್ತಾನವೊಂದೇ ಹಿಂದೀ ಸಮಸ್ಯೆಗೆ ಉತ್ತರ" ಎಂದು ಸಾರಿದ್ದರ ಬಗ್ಗೆ ಅಗ್ರಲೇಖ ಬರೆಯುತ್ತ ಇಜಿಪ್ತದ ಪ್ರಮುಖ ಬ್ರಿಟಿಶ ಚಾಲಿತ ಪತ್ರಿಕೆಯಾದ "ಇಜಿಪ್ಶನ್ ಗಝೆಟು" ರಾಷ್ಟ್ರಗಳು ಸಂಯುಕ್ತವಾಗಬೇಕೆಂದು ಪ್ರಯತ್ನಿಸುವ ಈ ಕಾಲದಲ್ಲಿ ಈ ವರೆಗಿಲ್ಲದ ಹೊಸ ಗಡಿಗಳನ್ನು ನಿರ್ಮಿಸಿ ರಾಷ್ಟ್ರಗಳನ್ನೊಡೆಯಬೇಕೆನ್ನುವ ಪ್ರಯತ್ನವನ್ನು ಟೀಕಿಸಿದೆ. ಆದರೆ ಇದೆಲ್ಲದರಿಂದ ಹಟವಾದಿಗಳು ತಮ್ಮ ಛಲವನ್ನು ಬಿಡಬಹುದೆ? ಕಾಂಗ್ರೆಸ್ಸಿನ ಗೊತ್ತುವಳಿಯನ್ನು ಮೀರಿ ಒಂದು ಹೆಜ್ಜೆ ಕೂಡ ಹಿಂದೆಮುಂದಿಡುವಂತಿಲ್ಲವೆಂದು ಜವಾಹರರು ಮೊದಲೇ ಹೇಳಿ ಒತ್ತಾಯದ ಆಮಂತ್ರಣ ಸ್ವೀಕರಿಸಿದ್ದಾರೆ. ಕಾಂಗ್ರೆಸ್ಸು ತನ್ನ ನಿಲುಮೆಯನ್ನು ಬದಲಿಸುವದು ಅಸಂಭಾವ್ಯ. ಇನ್ನು ಜಿನ್ನಾರು ಏನು ಮಾಡಬಹುದು? ಅದು ಬಹಳಮಟ್ಟಿಗೆ ಬ್ರಿಟಿಶ ಮಂತ್ರಿಗಳು ತೋರುವ ಮನೋಬಲ-ದೌರ್ಬಲ್ಯಗಳನ್ನು ಅವಲಂಬಿಸಿದೆ. ಅವರು ಗಟ್ಟಿಮನಸ್ಸು ಮಾಡಿದರೆ ಇವರು ನಡುಗಾಲ ಸರಕಾರದಲ್ಲಿ ಪ್ರವೇಶಿಸಿದಂತೆ ಘಟನಾ ಸಮಿತಿಯಲ್ಲಿಯೂ "ಹಿತ್ತಲ ಬಾಗಿಲಿಂದ" ಪ್ರವೇಶಿಸಬಹುದು. ಆದರೆ ಒಂದು ವೇಳೆ ಜಿನ್ನಾ ಸಾಹೇಬರು ತಮ್ಮ ಸುದೈವವನ್ನು ನಂಬಿ ಕುರುಡ ಹಿಡಿದದ್ದೇ ಬಡಿಗೆಯೆಂದು ಕುಳಿತರೆ ಮುಂದೇನು? ಲೀಗು ಬರಲಿ ಬಿಡಲಿ, ಘಟನಾ ಸಮಿತಿ ಸೇರುವದೆಂದು ಕಾಂಗ್ರೆಸ್ಸೇನೋ ನಿರ್ಧರಿಸಿದೆ ಆದರೆ ಕೇವಲ ನಾಲ್ಕು ಮುಸ್ಲಿಂ ಸದಸ್ಯರನ್ನೊಳಗೊಂಡ ಈ ಘಟನಾ ಸಮಿತಿ ಗೊತ್ತುಪಡಿಸಿದ ಘಟನೆ ಎಷ್ಟುಮಟ್ಟಿಗೆ ಮಾನ್ಯವಾದೀತು? ಇದರ ಪರಿಣಾಮ ಏನಾಗಬಹುದು? ಇದರಲ್ಲಿರುವ ಪಣ ಇಷ್ಟು ಘನವಾಗಿರುವದರಿಂದ ವಿಶಾಲತರ ಹಿತಕ್ಕೆ ಮಹತ್ವಕೊಟ್ಟು ಉಭಯತರೂ ಉದಾರರಾಗಬಹುದೆಂದಿಷ್ಟೇ ಆಶೆ. ಆದರೆ ಪಂಡಿತ ಜವಾಹರಲಾಲರು ಲಂಡನ್ನಿನಲ್ಲಿ ಅನೇಕ ಸಾರೆ ಹೇಳಿದಂತೆ ಹಿಂದುಸ್ತಾನದಲ್ಲಿ ಪರಕೀಯರು ಆಳುತಿರುವಷ್ಟು ಕಾಲ ಅವರು ಎಷ್ಟೇ ಸದುದ್ದೇಶದಿಂದ ವರ್ತಿಸಲಿ ಅದರ ಪರಿಣಾಮ ಐಕ್ಯಕ್ಕೆ ವಿಘಾತಕವಾಗುವದೆಂದು ಹೇಳಲು ಯಾವ ಅಡ್ಡಿಯೂ ಇಲ್ಲ.

### ಜನ ವರ್ಗಾಯಿಸುವ ಹುಚ್ಚು

ಹಿಂದುಸ್ತಾನ ಪಾಕಿಸ್ತಾನಗಳಿಂದ ಅಲ್ಪಸಂಖ್ಯಾಕರನ್ನು ವರ್ಗಾಯಿಸುವ ಜಿನ್ನಾರ,—ಸರದಾರ ಪಟೇಲರ ಮಾತಿನಲ್ಲಿ—ಹುಚ್ಚು ದೊಡ್ಡ ವಿವಾದವನ್ನೆ ಎಬ್ಬಿಸಿದೆ. ಸುಮಾರು ಎಂಟು ಕೋಟಿ ಜನರು—ಹಿಂದೂ ಮುಸ್ಲಿಮರು ಇದರಿಂದ ತಮ್ಮ ಸಾವಿರಾರು ವರ್ಷಗಳ ಮಾತೃಭೂಮಿಯನ್ನು ತ್ಯಜಿಸಿ ಹೊಸ ವೇಷ, ಭೂಷೆ ಭಾಷೆಗಳ ನಾಡಿಗೆ ವಲಸೆ ಹೋಗಬೇಕಾಗುವದು ಜಿನ್ನಾರ ಇಚ್ಛೆಫಲಿಸಬೇಕಾದರೆ ಸರದಾರರು ಇದರ ವಿರುದ್ಧ ಕೊಟ್ಟ ಹೇಳಿಕೆ ಅನ್ಯತ್ರ ಪ್ರಕಟವಾಗಿದೆ. ಅವರಿಗುತ್ತರವಾಗಿ ಪಂಜಾಬಿನ ಮಮದೋತ ನವಾಬರು ಜನರನ್ನು ವರ್ಗಾಯಿಸುವದೊಂದೇ ಉಪಾಯವೆಂದು ಹಟ ತೊಟ್ಟಿದ್ದಾರೆ. ಆದರೆ ಸೀಖರು ಪಂಜಾಬ ಬಿಟ್ಟು ಹೋಗಬಾರದೆಂದು ಶೀಖ ಧುರೀಣರು ಕೊಟ್ಟ ಹೇಳಿಕೆಯನ್ನು ಕುರಿತು, ಅವರು ಸೀಖರ ಕಡೆ ಪ್ರೀತಿಯಿಂದ ನಕ್ಕು "ನಿಮ್ಮನ್ನು ಪಂಜಾಬದಿಂದ ಹೊರಡಿಸುವದು ನಮ್ಮ ಉದ್ದೇಶವಲ್ಲ. ನೀವೂ ನಾವೂ ಜತೆಯಾಗಿ ಬಾಳೋಣ. ಆದರೆ ಆ ಹಿಂದುಗಳನ್ನಷ್ಟೇ ಓಡಿಸುವದು ನಮ್ಮ ಉದ್ದೇಶವಿದೆ" ಎಂದು ಹೇಳಿದ್ದಾರೆ. ಸಾಮಾನ್ಯವಾಗಿ ಈಚೆಗೆ ವಿವಾದಾಸ್ಪದ ವಿಷಯಗಳಲ್ಲಿ ಮಾತಾಡದೆ ಪೂರ್ವ ಬಂಗಾಲದಲ್ಲಿ ಶಾಂತಿಸ್ಥಾಪಿಸಲು ಹೆಣಗುತ್ತಿರುವ ಗಾಂಧೀಜಿಯವರು ಕೂಡ ಈ ವಿವಾದದಲ್ಲಿ ಸೆಳೆಯಲ್ಪಟ್ಟಿದ್ದಾರೆ. "ಜನರನ್ನು ಅದಲು ಬದಲು ಮಾಡುವ ವಿಚಾರ ಅವ್ಯವಹಾರ್ಯವೂ ಅಚಿಂತನೀಯವೂ ಆಗಿದೆ. ಈ ವಿಚಾರ ಎಂದೂ ನನ್ನ ಮನಸ್ಸಿನಲ್ಲಿ ಸುಳಿದಿಲ್ಲ. ಪ್ರತಿಯೊಂದು ಪ್ರಾಂತದಲ್ಲಿಯ ಪ್ರತಿಯೊಬ್ಬನು ಹಿಂದುವಿರಲಿ, ಮುಸ್ಲಿಮನಿರಲಿ, ಮತ್ತಾರೇ ಇರಲಿ ಅವನು ಹಿಂದೀಯನೆ. ಈ ವಿಚಾರದಿಂದ ಹಿಂದೀಯರ ಜಾಣ್ಮೆ ಮುತ್ಸದ್ದಿತನದ ಅಭಾವವೇ ವ್ಯಕ್ತವಾಗುತ್ತದೆ. ನಿರಾಶೆಯ ಪರಾಕಾಷ್ಠೆಯಲ್ಲಿ ಕೈಕೊಳ್ಳತಕ್ಕ ಕ್ರಮುವಿದು. ಈಗ ಇದು ಅವಶ್ಯವಿಲ್ಲ" ಎಂದರವರು.

### ಬಂಗಾಲದಲ್ಲಿ ಗಾಂಧೀಜಿ

ಪೂರ್ವ ಬಂಗಾಲದಲ್ಲಿ ಗಾಂಧೀಜಿಯ ಶಾಂತಿಪ್ರಯತ್ನ ಯಥಾಸಾಂಗವಾಗಿ ನಡೆಯುತ್ತಿದೆ ಮುಸ್ಲಿಮರೊಡನೆ ಅವರು ಹೆಚ್ಚು ಹೆಚ್ಚು ಸಂಪರ್ಕ ಬೆಳೆಸುತಿದ್ದಾರೆ ಮತ್ತು ಅನೇಕವೇಳೆ ಮುಸ್ಲಿಂ ಮೌಲವಿ ಮೌಲಾನಾರೊಡನೆ ಚರ್ಚೆಗಳನ್ನೂ ನಡೆಸಿದ್ದಾರೆ. ಅವರ ಉಪದೇಶದಿಂದ ಕೆಲ ಹಿಂದುಗಳು ತಮ್ಮ ತಮ್ಮ ಮನೆಗಳಿಗೆ ಮರಳ ತೊಡಗಿರುವರು. ಆದರೆ—ಜಿನ್ನಾರ ಜನರ ಅದಲು ಬದಲಿನ ಕೂಗಿನಿಂದಲೋ ಏನೋ—ಮುಸ್ಲಿಮರ ಸಹಕಾರ ಇದರಲ್ಲಿ ಸಾಕಷ್ಟು ಸಿಗುತ್ತಿಲ್ಲ. ಆದುದರಿಂದ ನಿರಾಶ್ರಿತ ಶಿಬಿರಗಳಲ್ಲಿದ್ದ ಬಹು ಜನರು ನೌಖಾಲಿ ಜಿಲ್ಹೆಗೆ ಮರಳದೆ ಸಮೀಪದ, ಅವರಿಗೆ ಭದ್ರವೆಂದು ತೋರಿದ ಜಿಲ್ಹೆಗಳಿಗೆ ಹೋಗತೊಡಗಿರುವರು. ಗಾಂಧೀಜಿ ಈ ಜಾತೀಯ ಪ್ರಶ್ನೆಯವಿಷಯದಲ್ಲಿ ತಮಗಿನ್ನೂ ಕಗ್ಗತ್ತಲೆಯೇ ಕಾಣಿಸುತ್ತಿದೆಯೆಂದೂ ಯಾವ ಮಾರ್ಗವೂ ಹೊಳೆಯದಿದೆಯೆಂದೂ ಆದರಿಂದ ತಮ್ಮ ಅಹಿಂಸಾತ್ಮದ ಬಲವನ್ನು ಪರೀಕ್ಷಿಸುವ ಪಣ ತೊಟ್ಟಿರುವೆವೆಂದು ಹೇಳುತಿದ್ದಾರೆ. ಅವರು ಸದ್ಯಕ್ಕೆ ಶ್ರೀರಾಮಪುರದಲ್ಲಿದ್ದರೂ ಇನ್ನು ಮುಂದೆ ಬೇರೆ ಹಳ್ಳಿಗಳಲ್ಲಿಯೂ ಹೋಗಿ ಇದ್ದು ಶಾಂತಿಸ್ಥಾಪನೆಯ ಪ್ರಯತ್ನ ನಡೆಸುವದಾಗಿ ಹೇಳಿದ್ದಾರೆ. ಇತ್ತ ಢಾಕಾದಲ್ಲಿ ಮತ್ತೆ ಗಲಭೆ ಉರಿದೆದ್ದಿದೆ. ಮೊನ್ನೆ ಮೊನ್ನೆ ಢಾಕಾ ಕಾಲೇಜಿನಲ್ಲಿ ಹೊಕ್ಕು ಪ್ರಾಧ್ಯಾಪಕರನ್ನೂ ಒಬ್ಬ ಪ್ರೊಫೆಸರರನ್ನೂ ಇರಿದರು. ಪ್ರೊಫೆಸರರು ಈಗಾಗಲೆ ಸತ್ತಿದ್ದಾರೆಂದೂ ಪ್ರಾಧ್ಯಾಪಕರ ಸ್ಥಿತಿ ಬಹಳ ಗಂಭೀರವಾಗಿದೆಯೆಂದೂ ಸುದ್ದಿ ಬಂದಿದೆ. ಇನ್ನೂ ಇರಿತ ಕೊಲೆಗಳು ನಡೆದೇ ಇವೆ. ಈ ಎಲ್ಲ ಪ್ರಸಂಗಗಳಿಂದ ಗಾಂಧೀಜಿಯ ಬಂಗಾಲ ಪ್ರವಾಸ ಎಷ್ಟು ದೀರ್ಘವಾಗಬಹುದೆಂದು ಊಹಿಸದಂತಾಗಿದೆ.

# ಅಂತರ್ ರಾಷ್ಟ್ರೀಯ

### ಸ್ಮಟ್ಸರ ಸೋಲು

ಬಿಳಿ ರಾಷ್ಟ್ರಗಳಿಗೇ ಬಹುಮತವುಳ್ಳ ಯುಕ್ತ ರಾಷ್ಟ್ರ ರಾಜಕೀಯ ಮತ್ತು ಕಾಯದೆ ಸಮಿತಿಯಲ್ಲಿ ಕೂಡ ದಕ್ಷಿಣ ಆಫ್ರಿಕೆಯ ಹಿಂದೀಯರ ಪ್ರಶ್ನೆಯಲ್ಲಿ ಜನರಲ್ ಸ್ಮಟ್ಸರು ಸೋಲನ್ನು ಸಂಪಾದಿಸಬೇಕಾಯಿತು. ದಕ್ಷಿಣ ಆಫ್ರಿಕೆಯ ಹಿಂದೀಯರ ಪ್ರಶ್ನೆಯನ್ನು ಹಿಂದುಸ್ತಾನವೂ ದಕ್ಷಿಣ ಆಫ್ರಿಕೆಯೂ ಸೇರಿ ಪರಸ್ಪರರಲ್ಲಿ ಬಿಡಿಸಿಕೊಂಡು ಯುಕ್ತರಾಷ್ಟ್ರಗಳ ಮುಂದಿನ ಅಧಿವೇಶನದಲ್ಲಿ ವರದಿ ಮಾಡಬೇಕೆಂಬ ಗೊತ್ತುವಳಿ ಕಳೆದವಾರ ಸ್ವೀಕೃತವಾದಾಗ ಹಿಂದೀ ಪ್ರತಿನಿಧಿಗಳ ಪ್ರಯತ್ನಕ್ಕೆ ಎರಡನೆಯ ಬಾರಿ ಯಶಸ್ಸು ಸಿಕ್ಕಿತು. ಮೇಲಿನ ಆಶಯದ ಗೊತ್ತುವಳಿಯನ್ನು ಫ್ರಾನ್ಸ ಮತ್ತು ಮೆಕ್ಸಿಕೋ ಸೇರಿ ಮಂಡಿಸಿದವು ಮತ್ತು ದಕ್ಷಿಣ ಆಫ್ರಿಕೆಯ ಅವಿನೀತ ಪ್ರತಿನಿಧಿಗಳಾದ ನಿಕೊಲಸರು "ಯುರೋಪಿಯನ್ ಕ್ರಿಶ್ಚನ್ ನಾಗರಿಕತೆ"ಯ ಹೆಸರಲ್ಲಿ ದಕ್ಷಿಣ ಆಫ್ರಿಕೆಯ ಬಿಳಿಯರ ಕೃತಿಯನ್ನು ಸಮರ್ಥಿಸಲು ಎಷ್ಟು ಪ್ರಯತ್ನಿಸಿದರೂ ಬಹುಸಂಖ್ಯಾಕ ರಾಷ್ಟ್ರಗಳು ಅದಕ್ಕೆ ಕಿವಿಗೊಡಲಿಲ್ಲ. ೨೪ ಅನುಕೂಲ,೧೯ ಪ್ರತಿಕೂಲ ಮತಗಳಿಂದ ಗೊತ್ತುವಳಿ ಅಂಗೀಕೃತವಾದಾಗ, ಯಾರ ಅವಿಶ್ರಾಂತ ಪರಿಶ್ರಮದಿಂದ ಈ ಪ್ರಶ್ನೆ ಇಷ್ಟು ಯಶಸ್ವಿಯಾಗಿ ಜಗತ್ತಿನ ಮುಂದೆ ಮಂಡಿಸಲ್ಪಟ್ಟಿತೋ ಆ ವಿಜಯಲಕ್ಷ್ಮಿ ಪಂಡಿತರ ಮೇಲೆ ಅಭಿನಂದನೆಗಳ ಜಡಿಮಳೆಯೇ ಸುರಿಯಿತು. ಸ್ವತಃ ಜನರಲ್ ಸ್ಮಟ್ಸರೇ ಅವರನ್ನು ಅಭಿನಂದಿಸಿ "ನಿನಗೆ ತೃಪ್ತಿಯಾಯಿತೆ?" ಎಂದು ಕೇಳಿದರು. ಉತ್ತರಿಸಿದರು ವಿಜಯಲಕ್ಷ್ಮಿ: "ನನಗೆ ತೃಪ್ತಿಯೂ ಆಗಿಲ್ಲ ಅತೃಪ್ತಿಯೂ ಆಗಿಲ್ಲ! ಆದರೆ ನಮ್ಮ ಜನಾಂಗದ ದುಃಸ್ಥಿತಿ ಈ ಸಭೆಯ ಕಿವಿಗೆ ಬಿತ್ತು. ಅಷ್ಟೇ ಸಾಕು." ಉಸುರ್ಗರೆದರು ವೃದ್ಧ ಸ್ಮಟ್ಸ: "ಮಗುವೆ ನಾನೂ ನೀನೂ, ಜಗತ್ತಿನೊಡನೆ ಇನ್ನೂ ಹೋರಾಡುವದಿದೆ."

ಸ್ಮಟ್ಸರೆಂದುದು ಸರಿ: ಈ ವಿಜಯ ಕೊನೆಯದೇನೂ ಅಲ್ಲ. ಈ ಗೊತ್ತುವಳಿ ಯುಕ್ತರಾಷ್ಟ್ರ ಮಹಾಸಭೆಯಲ್ಲಿ ಅಂಗೀಕೃತವಾಗಬೇಕಾಗಿದೆ. ಅಲ್ಲಿ ಗೊತ್ತುವಳಿ ಮೂರರಲ್ಲೆರಡಂಶದಷ್ಟು ಬಹುಮತ ದೊರಕಿಸಬೇಕಾಗುವದು. ಈ ಸಮಿತಿಯಲ್ಲಿಯೆ ಅದು ಬಹಳ ಕಷ್ಟದಿಂದ ಪಾಸಾಗಿದೆ. ೧೯ ರಾಷ್ಟ್ರಗಳು ವಿರುದ್ಧ ಮತ ಕೊಟ್ಟದ್ದಲ್ಲದೆ ಇನ್ನು ೧೧ ರಾಷ್ಟ್ರಗಳು ತಟಸ್ಥವಾಗಿಯೋ ಸಭೆಗೆ ಬಾರದೆಯೊ ಉಳಿದಿದ್ದವು. ಬ್ರಿಟಿಶ ಗುಂಪಲ್ಲದೆ ಮೊದಲು ಸವಿ ಮಾತಾಡಿದ ಅಮೇರಿಕೆಯೂ ಗೊತ್ತುವಳಿಯ ವಿರುದ್ಧ ಮತವಿತ್ತದ್ದು ವಿಷಾದಕರವೂ ಅರ್ಥಪೂರ್ಣವೂ ಆಗಿದೆ.

### ಸೈನ್ಯದ ಲೆಕ್ಕ

ಸ್ವದೇಶವಲ್ಲಲ್ಲದೆ ಬೇರೆ ಎಲ್ಲೆಲ್ಲಿ ಎಷ್ಟೆಷ್ಟು ಸೈನ್ಯವನ್ನು ಯುಕ್ತರಾಷ್ಟ್ರ ಸದಸ್ಯರಾದವರು ಇಟ್ಟಿದ್ದಾರೆಂದು ಲೆಕ್ಕ ಕೇಳುವ ಗೊತ್ತುವಳಿ ಕೊನೆಗೆ ಅದರ ಸೂಚಕರಾದ ರಶಿಯನ್ ವಿದೇಶ ಮಂತ್ರಿ ಮೊಲಟೋವರ ಮನಸ್ಸಿಗೊಪ್ಪದ ಬ್ರಿಟಿಶ ತಿದ್ದುಪಡಿಗಳೊಡನೆ ಸ್ವೀಕೃತವಾಯಿತು. ಮೊಲಟೋವರು ಅಪೇಕ್ಷಿಸಿದ ವಿವರಗಳಲ್ಲದ (ಕರ್ಮವೀರ, ೨—೧೨—೪೬) ಬ್ರಿಟಿಶ ಪ್ರತಿನಿಧಿ, ಆಯಾ ರಾಷ್ಟ್ರಗಳು ಸ್ವದೇಶದಲ್ಲಿಟ್ಟಿರುವ ಸೈನ್ಯದ ಲೆಕ್ಕವನ್ನೂ ಕೊಡಬೇಕೆಂದು ತಿದ್ದುಪಡಿ ಸೂಚಿಸಿದ್ದನು. ಇದರಿಂದ ಜಗತ್ತಿನ ದೃಷ್ಟಿಯಲ್ಲಿ ಸೋವಿಯಟ್ಟಿನ ಬಹಳ ದೊಡ್ಡ ಸೈನ್ಯದ ಸಂಖ್ಯೆ ನಟ್ಟುಬಿಟ್ಟು ಉಳಿದವರ ದುರ್ಬುದ್ಧಿ ಮರೆಯಾಗಬಹುದೆಂಬ ಬ್ರಿಟಿಶ ಆಶೆ ಸಫಲವಾಯಿತು. ಗೃಹರಂಗದಲ್ಲಿರುವ ಸೈನ್ಯದ ವಿವರ ಕೊಡುವದಕ್ಕೆ ತಮ್ಮದೇನೂ ಆಕ್ಷೇಪವಿಲ್ಲದಿದ್ದರೂ ಈ ಗೊತ್ತುವಳಿಯ ಉದ್ದೇಶಕ್ಕೆ ಅದು ವ್ಯತಿರಿಕ್ತವಾದುದರಿಂದ ಅದನ್ನು ಬೇರೆಯೇ ಆಗಿಯಾಗಿ ತರಬೇಕೆಂಬ ಮೊಲಟೋವರ ವಾದವನ್ನು ಸಭೆ ಬಹುಮತದಿಂದ ತಿರಸ್ಕರಿಸಿತು.

ಯುಕ್ತ ರಾಷ್ಟ್ರ ಸಮಿತಿಗಳಲ್ಲಿ ನಡೆದ ಬೇರೆ ಪ್ರಮುಖ ಚಟುವಟಿಕೆಗಳಿವು.

● ನೈಋತ್ಯ ಆಫ್ರಿಕೆಯನ್ನು ದಕ್ಷಿಣ ಆಫ್ರಿಕೆಯಲ್ಲಿ ಸೇರಿಸಿಬಿಡಬೇಕೆಂಬ ದ. ಆಫ್ರಿಕೆಯ ಗೊತ್ತುವಳಿಯನ್ನು ವಿರೋಧಿಸುವ ಅಮೇರಿಕನ್ ಗೊತ್ತುವಳಿ ವಿಶ್ವಸ್ತ ಸಮಿತಿಯಲ್ಲಿ ಪಾಸಾಯಿತು. ಸ್ಮಟ್ಸರ ಇನ್ನೊಂದು ಸೋಲಿದು.

● ಪಶ್ಚಿಮ ಸಾಮೋವಾದ ವಿಶ್ವಸ್ತ ಆಡಳಿತೆಯ ಬಗ್ಗೆ ನ್ಯೂಝೀಲಂಡು ತಯಾರಿಸಿದ ವಿಶ್ವಸ್ತ ಒಡಂಬಡಿಕೆಯಲ್ಲಿ ಸಂರಕ್ಷಣೆಯ ಸಂಬಂಧ ಮಿಲಿಟರಿ ವ್ಯೂಹ ಕಟ್ಟಲು ಹಿಂದುಸ್ತಾನ ಮುಂದೊಡ್ಡಿದ ವಿರೋಧಕ್ಕೆ ಬೆಂಬಲ ಸಿಕ್ಕಲಿಲ್ಲ. ಟೆಂಗನಿಯಾಕಾದ ಸಂರಕ್ಷಣೆಗಾಗಿ ಕೋಟೆ ಕೊತ್ತಲ ಕಟ್ಟಲು ಬ್ರಿಟನ್ನಿಗೆ ಅನುಮತಿ ಕೊಡಬಾರದೆಂದು ಮಾಡಿದ ರಶಿಯಾದ ಪ್ರಯತ್ನವೂ ವ್ಯರ್ಥವಾಯಿತು.

● ಯುದ್ಧದಲ್ಲಿ ಅಣು ಬಾಂಬಿನ ಅಥವಾ ಅಂಥ ಅಣು—ಶಸ್ತ್ರಾಸ್ತ್ರಗಳ ಪ್ರಯೋಗವನ್ನು ಪ್ರತಿಬಂಧಿಸಬೇಕೆಂಬ ರಶಿಯಾದ ನಿಶ್ಶಸ್ತ್ರೀಕರಣ ಪ್ರಸ್ತಾವಕ್ಕೆ ಬ್ರಿಟನ್ನದ ಕಟು ವಿರೋಧ ರಾಜಕೀಯ ಸಮಿತಿಯಲ್ಲಿ ತೋರಿ ಬಂತು. ಉಳಿದವರನ್ನು ನಿಶ್ಶಸ್ತ್ರಗೊಳಿಸಿ ತಾನು ಪಾರಾಗುವ ರಶಿಯಾದ ಆಟವಿದೆಂದು ಬ್ರಿಟಿಶ ಪ್ರತಿನಿಧಿಗಳು ಟೀಕಿಸಿದರು.

● ಸ್ಪೇನದಲ್ಲಿ ನಡೆದ ಫ್ರಾಂಕೋನ ಆಡಳಿತೆ ಬಲಾತ್ಕಾರದಿಂದ ಸಂಪಾದಿಸಿದ್ದಿರುವದರಿಂದ ಫ್ರಾಂಕೋನು ಅಧಿಕಾರವನ್ನು ತ್ಯಜಿಸಿ ನಿಷ್ಪಕ್ಷಪಾತ ಸರಕಾರದ ಕೆಳಗೆ ಯೋಗ್ಯ ಚುನಾವಣೆ ಜರಗಬೇಕೆಂದು ಸೂಚಿಸುವ ಅಮೇರಿಕೆಯ. ಗೊತ್ತುವಳಿ ಚರ್ಚೆಗೆ ಬಂದಿದೆ. ಇದರಿಂದ ಫ್ರಾಂಕೋನು ಸಿಟ್ಟಿಗೆದ್ದು ಅಮೇರಿಕೆಗೆ ನಿಷೇಧ ಸೂಚಕ ರಾಯಸ ಕಳಿಸಿದ್ದಾನೆ.

● ಯುಕ್ತರಾಷ್ಟ್ರ ಭದ್ರತಾ ಮಂಡಲದಲ್ಲಿ ಪ್ರಬಲ ರಾಷ್ಟ್ರಗಳಿಗಿರುವ ಪ್ರತಿಬಂಧಾಧಿಕಾರ (ವ್ಹಿಟೊ) ವನ್ನು ಕಡಿಮೆ ಮಾಡಬೇಕೆಂಬ ಸೂಚನೆಯ ಮೇಲೆ ತೀಕ್ಷ್ಣ ಚರ್ಚೆ ನಡೆದಿದೆ.

### ಜರ್ಮನಿಯ ಆಡಳಿತೆ

ಪಾಟ್ಸಡ್ಯಾಂ ಪರಿಷತ್ತಿನಲ್ಲಿ ಜರ್ಮನಿಯ ಆರ್ಥಿಕ ಐಕ್ಯವನ್ನು ಕಾಯ್ದುಕೊಂಡೇ ಚತುರ್ರಾಷ್ಟ್ರಗಳು ಆಡಳಿತ ನಡೆಸಬೇಕೆಂದು ತ್ರಿಮೂರ್ತಿಗಳು ನಿರ್ಧರಿಸಿದ್ದರು. ಆದರೆ ಭಿನ್ನಾಭಿಪ್ರಾಯದ ದೆಸೆಯಿಂದ ಇದು ಸಾಧ್ಯವಾಗದೆ ರಶಿಯನ್ ಆಕ್ರಮಿತ ಜರ್ಮನಿಯಲ್ಲೊಂದು ತೆರ, ಉಳಿದೆಡೆಗಳಲ್ಲೊಂದು ತೆರ ಜರ್ಮನರ ಜೀವನ ಸಾಗಬೇಕಾಯಿತು. ಪಶ್ಚಿಮ ಭಾಗದ ಆಕ್ರಮಣ ಮಾಡಿದ ಅಂಗ್ಲೋ—ಅಮೇರಿಕನ್ನರ ಪ್ರದೇಶದಲ್ಲಿ ಜರ್ಮನರ ಜೀವನ ಮಟ್ಟ ಬಹಳ ಇಳಿದು ಹೋಗಿ ತುಂಬ ಅಸಂತೋಷ ಉಂಟಾಗಿತ್ತು. ಈಗ ಅಂಗ್ಲೋ—ಅಮೇರಿಕನ್ನರು ತಮ್ಮ ಭಾಗದಲ್ಲಾದರೂ ಬಂದು ಸಮಾನವಾದ ಆಡಳಿತ, ಜೀವನ ಮಟ್ಟಗಳನ್ನು ಸ್ಥಾಪಿಸಲು ತಮ್ಮ ಆಕ್ರಮಣ ಪ್ರದೇಶಗಳನ್ನೊಂದುಗೂಡಿಸುವ (ಆರ್ಥಿಕ ದೃಷ್ಟಿಯಿಂದ) ಒಪ್ಪಂದವನ್ನು ಮಾಡಿಕೊಂಡಿದ್ದಾರೆ. ಜರ್ಮನರ ಆಹಾರ ಮಟ್ಟವನ್ನು ಎರಡೂ ಪ್ರದೇಶಗಳಲ್ಲಿ ೧೫೫೦ ಕಲೋರಿಯಲ್ಲಿ ಸ್ಥಿರವಾಗಿರಿಸಬೇಕೆಂದೂ ಅದಕ್ಕೆ ಬೀಳುವ ವೆಚ್ಚವನ್ನು ಅಂಗ್ಲೋ—ಅಮೇರಿಕನರಲ್ಲಿ ಸಮವಾಗಿ ಹಂಚಿಕೊಳ್ಳಬೇಕೆಂದೂ ಗೊತ್ತಾಗಿದೆ. ಜರ್ಮನಿಯ ಶಾಂತಿ ಪೂರ್ಣ ಬೆಳವಣಿಗೆಗಾಗಿಯೇ ಈ ಒಪ್ಪಂದ; ಇದು ನಾಲ್ಕು ಆಕ್ರಮಣ ಭಾಗಗಳ ಆರ್ಥಿಕ ಐಕ್ಯಸ್ಥಾಪನೆಯ ಮೊದಲು ಮೆಟ್ಟಿಲಾಗಲಿ; ಇದು ಯಾವ ರಾಷ್ಟ್ರದ ವಿರುದ್ಧವೂ ಮಾಡಿಕೊಂಡ ಒಪ್ಪಂದವಲ್ಲ ಎಂದು ಬ್ರಿಟಿಶ ವಿದೇಶಮಂತ್ರಿ ಬೆವಿನ್ನರು ಹೇಳಿದರೂ ರಶಿಯನ್ ಭಾಗದ ಜರ್ಮನರು ಹೆಚ್ಚು ಸುಖದಿಂದಿರುವದನ್ನು ಕಂಡು ಪಶ್ಚಿಮದ ಜರ್ಮನ್ನರು ರಶಿಯಾದ ಮುಖ ನೋಡತೊಡಗುವರೆಂಬ ಭಯದಿಂದಲೇ ಈ ಕ್ರಮ ಕೈಕೊಳ್ಳಲ್ಪಟ್ಟಿದೆಯೆಂದು! ಊಹಿಸಬಹುದು. ಹೇಗಿದ್ದರೂ ತುಂಬ ಕಷ್ಟಕ್ಕೆ ಸಿಲುಕಿದ್ದ ಜರ್ಮನ್ನರಿಗೆ ಇದರಿಂದ ಒಳಿತೇ ಆಯಿತು.

### ಇರಾಣದಲ್ಲಿ ಯಾದವಿ?

ಪ್ರಾಚೀನ ರಾಷ್ಟ್ರವಾದ ಇರಾಣವಿಂದು ಹೆಸರಿಗೆ ಸ್ವತಂತ್ರವಾಗಿದ್ದರೂ ಅದರ ಅವಸ್ಥೆ ಹಿರಿರಾಷ್ಟ್ರಗಳ ಕುತಂತ್ರ ಜಾಲದಿಂದ ಅಸಹನೀಯವಾಗುತ್ತ ನಡೆದಿದೆ. ಉತ್ತರದ ಅಝುರಬೈಜಾನ ಪ್ರಾಂತದಲ್ಲಿ ರಶಿಯನ್ ಬೆಂಬಲದಿಂದ "ಸ್ವಾಯತ್ತತೆ" ಸ್ಥಾಪಿಸಲ್ಪಟ್ಟದ್ದು ಓದುಗರಿಗೆ ಗೊತ್ತೇ ಇದೆ. ಈ ವರ್ಷ ಅದೇ ಪ್ರಕಾರ ಫಾರಸ ಪ್ರಾಂತದ ಗುಡ್ಡಗಾಡಿನ ಜನರು ಬ್ರಿಟಿಶ ಬೆಂಬಲದಿಂದ ದಂಗೆಯೆದ್ದು ಕೇಂದ್ರ ಸರಕಾರವನ್ನು ಹಣ್ಣು ಮಾಡಿದರು. ಈ ದಂಗೆಗಾರರನ್ನು ಸಂತೋಷಗೊಳಿಸಲೆಂದೋ ಏನೋ ಮುಖ್ಯ ಮಂತ್ರಿ ಘವಾಮ ಸುಲ್ತಾನೆಯವರು ತಮ್ಮ ಮಂತ್ರಿ ಮಂಡಲದ ತುದೇ (ಜನತಾ — ಅರ್ಥಾತ್ ರಶಿಯನ್ ಪಕ್ಷಪಾತಿ) ಪಕ್ಷದ ಮಂತ್ರಿಗಳನ್ನು ಕಿತ್ತು ಹಾಕಿ ಅನೇಕ ತುದೇ ನಾಯಕರನ್ನು ಬಂಧಿಸಿದರು. ಈಗ ದೇಶದಲ್ಲಿ ಕೇಂದ್ರ ಪಾರ್ಲಮೆಂಟಿಗೆ ಚುನಾವಣೆಯಾಗಬೇಕಾಗಿದ್ದು ಆ ಚುನಾವಣೆ ನಿಷ್ಪಕ್ಷಪಾತವಾಗಿ ಜರಗಬೇಕೆಂಬ ಉದ್ದೇಶದಿಂದ ಎಲ್ಲಕಡೆಯಂತೆ ಅಝುರಬೈಜಾನಕ್ಕೂ ಕೇಂದ್ರ ಸರಕಾರದ ಸೈನ್ಯ ಕಳಿಸಬೇಕೆಂದು ಅವರು ಹೊರಟಿದ್ದಾರೆ. ಆದರೆ ಈ ವರೆಗೆ ತಮ್ಮ ಪರವಾಗಿದ್ದ ಸುಲ್ತಾನೆಯವರ ಧೋರಣೆ ಈಗ ಬದಲಾದುದನ್ನು ನೋಡಿ ಅಝುರಬೈಜಾನದ ಸ್ವಾಯತ್ತ ಸರಕಾರದವರು ಕೇಂದ್ರ ಸರಕಾರದೊಡನೆ ತಾವು ಮಾಡಿಕೊಂಡ ಒಪ್ಪಂದವನ್ನು ರದ್ದುಗೊಳಿಸಿ ಕೇಂದ್ರದಸೈನ್ಯಕ್ಕೆ ಪ್ರವೇಶ ನಿರಾಕರಿಸಿದ್ದಾರೆ.ಹೀಗಾಗಿ ಘವಾಮರು ಬಹಳ ಇಕ್ಕಟ್ಟಿನಲ್ಲಿ ಬಿದ್ದಿದ್ದಾರೆ.ಅವರು ಕೇಂದ್ರ ಸರಕಾರದ ಅಧಿಕಾರ ನಡೆಸಹೋದರೆ ರಶಿಯನ್ನರಿಂದ ತರಬೇತಿ ಪಡೆದ ಅಝುರಬೈಜಾನ ಸೈನ್ಯ ಅವರನ್ನು ಎದುರಿಸುವದು ಮತ್ತು ಚೀನದಲ್ಲಿ ಹೇಗೋ ಹಾಗೆಯೆ ಇರಾಣದಲ್ಲಿಯೂ ಅಂತರ್ಯುದ್ಧ ಆರಂಭವಾಗುವದು.

# ಮೀರತದಲ್ಲಿ ಮುಂದಾಳುಗಳು

( ನಮ್ಮ ಸ್ವಂತ ಚಿತ್ರಗ್ರಾಹಕರಾದ ನಾರಾಯಣರಾವ ಕುಲಕರ್ಣಿ, ವಿಜಾಪುರ ಇವರಿಂದ )

ರಾಷ್ಟ್ರಪತಿ ಆಚಾರ್ಯ ಕೃಪಲಾನಿ ಮತ್ತು ಶ್ರೀಮತಿ ಸುಚೇತಾ ಕೃಪಲಾನಿ.

ಕಾಂಗ್ರೆಸ್ಸಿನ ತ್ರಿಮೂರ್ತಿಗಳು:— ಅಧ್ಯಕ್ಷ ಕೃಪಲಾನಿ, ಕೋಶಾಧ್ಯಕ್ಷ ಪಟೇಲ ಹಾಗು ನಿವೃತ್ತಾಧ್ಯಕ್ಷ ಜವಾಹರಲಾಲರು ಮಂತ್ರಾಲೋಚನೆಯಲ್ಲಿ,

ಮುಂಬಯಿ ಮುಖ್ಯಮಂತ್ರಿ ಶ್ರೀ ಖೇರರು ನಡುಗಾಲ ಸರಕಾರದ ಆಹಾರ ಮಂತ್ರಿ ರಾಜೇಂದ್ರರೊಡನೆ

ಡಾ. ರಾಜೇಂದ್ರ ಮತ್ತು ಪಟೇಲರು, ಪಂ. ಜವಾಹರ ಹಾಗು ಜಯಪ್ರಕಾಶರೊಡನೆ.

ಕರ್ನಾಟಕ ಪ್ರಾಂತಾಧ್ಯಕ್ಷ ಶ್ರೀ ಎಸ್. ನಿಜಲಿಂಗಪ್ಪ ಮತ್ತು ಶ್ರೀ ರಂಗನಾಥ ದಿವಾಕರ

ಗಡಿನಾಡಿನ ಕೆಂಪಂಗಿ ಸ್ವಯಂಸೇವಕರು ಧ್ವಜವಂದನೆಯಲ್ಲಿ

ಧ್ವಜವಂದನೆಯ ಒಂದು ದೃಶ್ಯ



# ಕರ್ಮವೀರ ಹರಿಜನ ಪುರವಣಿ

## 'ಮಾಡಿರಿ ಇಲ್ಲವೆ ಮಡಿಯಿರಿ' ಸಂದೇಶ

(೪)

ಸತ್ಯಾಗ್ರಹ ಮಾರ್ಗದಲ್ಲಿ ವಿರಾಮವೇ ಇಲ್ಲ. ಮಧ್ಯದಲ್ಲಿ ವಿಶ್ರಾಂತಿ ಸ್ಥಳವೇ ಇಲ್ಲ. ಯಾವಾಗಲೂ ಮುಂದೆ ಮುಂದೆ ಸಾಗತಕ್ಕದ್ದು; ಇಲ್ಲವೆ ಹಿಂದೆ ಸರಿಯತಕ್ಕದ್ದು. ನಾನು ಕಳೆದ ಹರಿಜನ ಸಂಚಿಕೆಯಲ್ಲಿ "ಶ್ರದ್ಧೆಯ ಸಾಹಸ"ವೆಂದು ವರ್ಣಿಸಿದ ನಿರ್ಧಾರವನ್ನು ಗಾಂಧೀಜಿಯವರು ದತ್ತಪಾರಾದಲ್ಲಿ ತೆಗೆದುಕೊಂಡರು. ಕೆಲ ಅತ್ಯಗತ್ಯದ ಕೆಲಸಕ್ಕೆಂದು ಒಂದು ದಿನ ಉಳಿದು ದತ್ತಪಾರಾದಿಂದ ನಾನು ಹೊರಟೆ. ಆಗ ಗಾಂಧೀಜಿ ಕಜಿರಖಿಲ್‌ಕ್ಕೆ ಸ್ಥಳಾಂತರಿಸಿದರು. ಅವರು ಆಗ ಮತ್ತೊಂದು ಹೆಜ್ಜೆ ಮುಂದಿಟ್ಟರೆಂದು ನನಗೆ ಕಂಡು ಬಂದಿತು. ಬಂಗಾಲ ಮಂತ್ರಿಮಂಡಳದವರಿಗೆ ಮಾನ್ಯವಿರುವ ಒಬ್ಬ ಸಭ್ಯ ಮುಸ್ಲಿಂಲೀಗಿನವನೊಬ್ಬ ತನ್ನ ಮನೆಯ ಪರಿವಾರದವನೆಂದು ನನ್ನನ್ನು ಕಾಣಬಯಸಿದರೆ ಮುಸಲ್ಮಾನನ ಮನೆಯಲ್ಲಿಯೆ ಇರಬೇಕೆಂದು ಅವರು ನಿರ್ಧರಿಸಿದರು. ೧೬ ನೇ ದಿನಾಂಕ ನಾಗರಿಕ ಪೂರಯಿಕೆ ಶಾಖೆಯ ಮಂತ್ರಿಗಳಾದ ಗೊಫ್ರಾನ ಸಾಹೇಬರು ಅವರನ್ನು ಕಂಡಾಗ ಗಾಂಧೀಜಿ ಅವರೊಡನೆ ಈ ಬಗ್ಗೆ ಚರ್ಚೆ ಮಾಡಿದರು. ಯಾರಾದರೂ ಅಂಥ ಸಭ್ಯ ಮುಸಲ್ಮಾನರ ಪರಿಚಯ ಮಾಡಿಕೊಡುವಿರಾ ಎಂದು ಕೇಳಿದರು. ತಮ್ಮ ಪರಿವಾರದವರನ್ನೆಲ್ಲ ಬಿಟ್ಟುಗೊಟ್ಟು ಅವರ ಪರಿಚರ್ಯೆಯನ್ನು ಹೇಗೆ ಮಾಡಬೇಕೆಂಬುದನ್ನರಿಯದ ಜನರ ಮಧ್ಯದಲ್ಲಿ ಗಾಂಧೀಜಿ ಇರುವದನ್ನು ಕಂಡು ಸಾಹೇಬರಿಗೆ ಆಶ್ಚರ್ಯವೆನಿಸಿತು. "ನನ್ನ ಪರಿಚರ್ಯೆಯನ್ನ ನಾನೇ ನೋಡಿಕೊಳ್ಳುವೆ. ಎರಡನೆಯವರ ಸಹಾಯ ನನಗೇನು ಬೇಡ" ಎಂದು ಗಾಂಧೀಜಿ ವಾದಿಸಿದರು. ಮುಸಲ್ಮಾನರಾರೂ ನಿಮ್ಮನ್ನು ಸ್ವಾಗತಿಸಲು ಸಿದ್ಧರಾಗಲಾರರೆಂದು ನನಗೆ ಅಂಜಿಕೆಯಿದೆಂದು ನಾನು ಹೇಳಲೇಬೇಕಾಗಿದೆಂದು ಗೊಫ್ರಾನ ಸಾಹೇಬರು ನಗುತ್ತ ಉತ್ತರಿಸಿದರು. ಆದರೆ ಗಾಂಧೀಜಿಯವರನ್ನು ಇಷ್ಟು ಸುಲಭವಾಗಿ ಮನವೊಲಿಸುವದು ಶಕ್ಯವಿಲ್ಲ. ಸಾಯಂಪ್ರಾರ್ಥನೆಯ ನಂತರ ಗಾಂಧೀಜಿ ಅದನ್ನು ವಿವರಿಸಿ ಹೇಳಿದರು. ನವಖಾಲಿಯಲ್ಲಿ ಮುಸ್ಲಿಮರ ಮಧ್ಯದಲ್ಲಿ ಅವರಿದ್ದರು. ಅವರಂದುದು: ಹಿಂದುಗಳ ಮಧ್ಯದಲ್ಲಿ ಇರುವ ವಿಚಾರ ನನಗೆ ರುಚಿಸದು. ಮುಸ್ಲಿಂಲೀಗಿನ ಮುಸಲ್ಮಾನನ ಸಂಗಡ ಇರಬೇಕೆಂದು ನನ್ನ ಇಚ್ಛೆ. "ನನಗೆ ಬೇಕಾದ ವಸ್ತುಗಳು ಬಹಳ ಸ್ವಲ್ಪ. ನನಗೆ ಬೇಕಾದುದು ಸ್ವಚ್ಛತೆ, ಸ್ವಚ್ಛನೀರು, ಉಚಿತ ಆಹಾರ ನನಗೆ ಸರಿಕಂಡ ರೀತಿಯಲ್ಲಿ ಪರಮಾತ್ಮನನ್ನು ಪ್ರಾರ್ಥಿಸುವ ಸ್ವಾತಂತ್ರ್ಯ" ಇಷ್ಟಾದರೆ ಸಾಕು. ಮುಸ್ಲಿಂಲೀಗಿನವರ ಮನೆಯಲ್ಲಿ ನಾನಿರುವೆನೆಂಬುದು ಹಿಂದುಗಳಿಗೆಗೊತ್ತಾದರೆ ಅವರು ಕಳೆದುಕೊಂಡ ವಿಶ್ವಾಸವನ್ನು ಮರಳಿ ಪಡೆದು ತಮ್ಮ ತಮ್ಮ ಮನೆಗಳಿಗೆ ಮರಳಿ ಬರಲು ಹೆಚ್ಚು ಸಿದ್ಧರಾಗುವರೆಂದು ಗಾಂಧೀಜಿಯವರ ಆಸೆ. ಮುಸ್ಲಿಂ ಮಿತ್ರರು ನನ್ನನ್ನು ಹೆಚ್ಚು ಸಮೀಪದಿಂದ ಪರೀಕ್ಷಿಸಿ ತಿಳಿದುಕೊಳ್ಳುವ ಸಂಧಿ ದೊರೆಯುವದು. ನಾನು ಮಿತ್ರನೋ ಶತ್ರುವೋ ಎಂಬದನ್ನು ಕಂಡುಕೊಳ್ಳಲೂ ಅವರಿಗೆ ಅವಕಾಶ ದೊರೆಯುವದು"

ಮುಸಲ್ಮಾನ ಮಿತ್ರನೊಬ್ಬನು ತಮ್ಮನ್ನು ಸ್ವಾಗತಿಸಲು ಸಿದ್ಧನಾಗುವ ವರೆಗೆ ತಮ್ಮ ಹೊಸ 'ಶ್ರದ್ಧೆಯ ಸಾಹಸ'ದ ಯೋಜನೆಯನ್ನು ಮುಂದಕ್ಕೆ ಹಾಕುವದೂ ಅವರಿಗೆ ಬೇಕಾಗಿರಲಿಲ್ಲ. "ಆಗಾಖಾನ ಅರಮನೆಯಲ್ಲಿ ನಾನು ಸ್ಥಾನಬದ್ಧತೆಯಲ್ಲಿದ್ದಾಗ, ಅಹಿಂಸೆಯನ್ನು ಪುರಸ್ಕರಿಸುತ್ತಿರುವ ಹಿಂದುಸ್ತಾನದ ಬಗ್ಗೆ ಒಂದು ಪ್ರಬಂಧ ಬರೆಯಲು ಕಲಿತೆ' ಎಂದು ಒಂದು ದಿನ ಗಾಂಧೀಜಿ ನುಡಿದರು. ಮುಂದುವರಿಯುತ್ತ "ಆದರೆ ನಾನು ಬರೆಯುತ್ತ ನಡೆದಂತೆ ಲೆಕ್ಕಣಿಕೆಯು ಮುಂದೆ ಸಾಗದಂತಾಯಿತು. ನಿಲ್ಲಬೇಕಾಯಿತು. ಹಿಂದು ಧರ್ಮದಲ್ಲಿ ಎರಡು ದರ್ಶನಗಳು ಇವೆ. ಅಸ್ಪೃಶ್ಯತೆಯನ್ನೊಳಗೊಂಡ ಐತಿಹಾಸಿಕ ಹಿಂದು ಧರ್ಮವೊಂದಿದೆ. ಅದರಲ್ಲಿ ಕಲ್ಲುಗುಂಡುಗಳ ಮೂಢ ಪೂಜೆ, ಪ್ರಾಣಬಲಿ ಮೊದಲಾದವುಗಳೆಲ್ಲ ಇವೆ. ಇದೊಂದು ಬಗೆ. ಎರಡನೆಯದಾಗಿ ಗೀತೆ, ಉಪನಿಷತ್ತು, ಪಾತಂಜಲ ಯೋಗಸೂತ್ರದಲ್ಲಿ ವಿವರಿಸಲ್ಪಟ್ಟ ಹಿಂದೂ ಧರ್ಮವಿದೆ. ಇದರಲ್ಲಿ ಅತ್ಯಂತಿಕ ಅಹಿಂಸೆ, ಪ್ರಾಣಿಮಾತ್ರರ ಐಕ್ಯ ನಿರಾಕಾರ ನಿರ್ಗುಣ, ಅವಿನಾಶಿಯಾದ ಪರಮಾತ್ಮನ ವಿಶುದ್ಧ ಪೂಜೆ, ಪ್ರತಿಪಾದಿತವಾಗಿವೆ. ಹಿಂದು ಧರ್ಮದ ಪರಮಶ್ರೇಷ್ಠ ಅಹಿಂಸೆಯು ಸಂನ್ಯಾಸಿಗಳಿಗೆ ಮಾತ್ರ ಸಂಬಂಧಿಸಿದ್ದೆಂದು ಹೇಳಿಬಿಡುವ ಜನರು ನಮ್ಮಲ್ಲಿ ಇವರು. ಆದರೆ ನನ್ನ ಅಭಿಪ್ರಾಯ ಹಾಗಿರುವದಿಲ್ಲ. ಅಹಿಂಸೆ ನಮ್ಮ ಜೀವನಪಂಥ. ಹಿಂದುಸ್ತಾನ ಇದೀ ಜಗತ್ತಿಗೆ ದಾರಿ ತೋರಿಸಿಕೊಡಬೇಕಾಗಿದೆಂದು ನನ್ನ ಅಭಿಪ್ರಾಯ. ಆದರೆ ನನ್ನೀ ಅಹಿಂಸಾಶ್ರದ್ಧೆಯನ್ನು ನಾನು ಪ್ರತಿನಿಧಿಸುವೆನೊ? ಅದನ್ನು ವರೆಗೆ ಹಚ್ಚಿರುವೆನೋ ? ನಾನು ಅದನ್ನು ವರೆಗೆ ಹಚ್ಚಿದರೆ ವಾತಾವರಣವನ್ನು ಕೆಡಿಸುತ್ತಿರುವ ಮೋಸ ಮತ್ತು ದ್ವೇಷದೀಜವು ನಾಶವಾಗತಕ್ಕದ್ದು. ಈ ವರೆಗೆ ಯಾರ ಸಹಾಯವನ್ನು ನಾನು ಆಶ್ರಯಿಸಿದ್ದೆನೊ ಅಂಥ ನನ್ನ ಪರಿವಾರದವರನ್ನೆಲ್ಲ ಬಿಟ್ಟುಗೊಟ್ಟು ನಾನೊಬ್ಬನೆ ಹೋಗತಕ್ಕದ್ದು. ಏಕಾಕಿಯಾಗಿದ್ದುಕೊಂಡು ಪರಮಾತ್ಮನಲ್ಲಿದ್ದ ನನ್ನ ಅತ್ಯಂತಿಕ ಶ್ರದ್ಧೆಯನ್ನು ವರೆಗೆ ಹಚ್ಚತಕ್ಕದ್ದು. ಇದೊಂದೇ ಮಾರ್ಗವಿದೆ. ಸೇವಾಗ್ರಾಮ ಆಶ್ರಮದ ಜನರಿಗೆ ಅವರು ಬರೆದರು.

"ಆಶ್ರಮಕ್ಕೆ ನಾನು ಬೇಗ ಬರುವೆನೆಂಬ ಆಶೆಯನ್ನು ನೀವು ಬಿಡಲಿಕ್ಕೆ ಬೇಕಾಗುವದೆಂದು ನನಗೆ ಭೀತಿ. ಅಥವಾ ಬರಲಿಕ್ಕೇ ಇಲ್ಲೆಂದು ನೀವು ಭಾವಿಸಬೇಕು. ನನ್ನ ಸಂಗಡಿಗರಿಗೂ ಇದೇ ಅನ್ವಯಿಸುವದು. ಭಗೀರಥ ಪ್ರಯತ್ನವು ನನ್ನನ್ನೆದುರಿಸುತ್ತಿದೆ. ನನ್ನ ಪರೀಕ್ಷಾಕಾಲವಿದು. ನಾನು ಪ್ರತಿಪಾದಿಸುತ್ತಿರುವ ಅಹಿಂಸೆ ಅಶಕ್ತರ ಅಸ್ತ್ರವೊ ಅಥವಾ ನಿಜವಾಗಿ ಸಶಕ್ತರ ಅಸ್ತ್ರವೊ? ಅದು ಸಶಕ್ತರ ಅಸ್ತ್ರವಾಗಿದೆಂಬುದನ್ನು ನಾನು ಕಂಡುಕೊಳ್ಳತಕ್ಕದ್ದು. ಇಲ್ಲವೆ ಅದನ್ನು ಸಂಪಾದಿಸುವಲ್ಲಿ ನಾನು ಜೀವನವನ್ನೇ ಮುಡುಪಾಗಿಡತಕ್ಕದ್ದು. ಇದೇ ನನ್ನ ಮಾರ್ಗ ಅದರ ಶೋಧನೆಗಾಗಿ ಈ ವಿಧ್ವಸ್ತ ಹಳ್ಳಿಯಲ್ಲಿ ನನ್ನ ಸಮಾಧಿ ಕಟ್ಟಿಕೊಳ್ಳಲು ನಾನು ಬಂದಿರುವೆ. ಪರಮಾತ್ಮನ ಸಂಕಲ್ಪದಂತೆ ಆಗುವದು.

೨೦ನೇ ದಿನಾಂಕ ಗಾಂಧೀಜಿಯವರು ತಮ್ಮ ಲಘುಲೇಖಕ ಶ್ರೀ ಪರುಶರಾಮ ಮತ್ತು ಬಂಗಾಲಿ ದ್ವಿಭಾಷಿಗಳಾದ ಪ್ರೊ. ನಿರ್ಮಲಕುಮಾರ ಬೋಸ ಇವರೊಂದಿಗೆ ಕೋಲಂಬಸನಂತೆ ಅಂಧಕಾರಮಯವಾದ ಅಜ್ಞಾತವನ್ನೆದುರಿಸಲು ತಮ್ಮ ಕಾಜಿರಖಿಲ್ ಶಿಬಿರವನ್ನು ಬಿಟ್ಟು ಹೊರಟರು. ತಮ್ಮ ಸುತ್ತಲು ನೆರೆದ ಅಲ್ಪ ಜನಸಂದಣಿಯನ್ನು ಬೀಳ್ಕೊಡುವ ಮೊದಲು ಅವರ ಸಣ್ಣ ಪ್ರಾರ್ಥನೆ ಸಭೆ ಸೇರಿಸಿದರು. ಆಗ ಅವರ ಪ್ರೀತಿಯ 'ವೈಷ್ಣವ ಜನತೋ ತೇನೆ ಕಹೀಯೆ' ಪದವನ್ನು ಹೇಳಲಾಯಿತು. ಅವರನ್ನು ಕರೆದುಕೊಂಡು ಶ್ರೀರಾಮಪುರದತ್ತ ಸಣ್ಣ ನಾವೆಯೊಂದು ಹೊರಟಕೂಡಲೆ ನೆರೆದವರ ಕಣ್ಣುಗಳಿಂದ ನೀರುದುರಹತ್ತಿದವು. ಗದ್ಗದಕಂಠರಾಗಿ ಅವರ ಬಾಯಿಂದ ಹೆಚ್ಚಿನ ಮಾತುಗಳು ಹೊರಡದಂತಾದವು.

ಮಹಾತ್ಮರು ಹೊರಟಕೂಡಲೆ ಅವರ ಅನುಯಾಯಿಗಳು ಮೊದಲೆ ಗೊತ್ತುಪಡಿಸಿದ ಸ್ಥಳಗಳಿಗೆ ಒಬ್ಬೊಬ್ಬರೆ ಹೊರಟರು. ಮಹಾತ್ಮರು ಮತ್ತು ಅವರ ಪರಿವಾರದವರು ಯಾವಯಾವ ಸ್ಥಳಗಳನು ಸಂದರ್ಶಿಸಿದರು, ಎಲ್ಲೆಲ್ಲಿರುವರು ಎಂಬ ಬಗ್ಗೆ ನಕ್ಷೆಯೊಂದನ್ನು ತೆಗೆಯಲಾಗಿದೆ.

ಶ್ರೀರಾಮಪುರದಲ್ಲಿ ಗಾಂಧೀಜಿ ವಾಸಿಸುವ ಗುಡಿಸಲು ಸುತ್ತಲೂ ವೈಭವಶಾಲಿ ಅಡಿಕೆ ಮತು ತೆಂಗಿನ ಮರಗಳಿಂದ ಯುಕ್ತವಾದ ಸ್ಥಳದಲ್ಲಿದೆ ಸೂರ್ಯ ಪ್ರಕಾಶ ಅವುಗಳ ಮಧ್ಯದಿಂದ ಬೀಳುತ್ತದೆ. ಆ ಗುಡಿಸಲಿನ ಸುತ್ತೆಲ್ಲ ಕೊಳ್ಳಿಯಿಂದ ಸುಡಲ್ಪಟ್ಟ ಮತ್ತು ವಿಧ್ವಂಸ ಮಾಡಲ್ಪಟ್ಟ ಪ್ರದೇಶ ಅಸಹ್ಯ ದೃಶ್ಯ. ಅವರು ಬಿಸಿನೀರಿನ 'ಟಬ್' ಸ್ನಾನವನ್ನು ಬಿಟ್ಟಿರುವರು ಮತ್ತು ಮೊದಲಿನ ಎರಡುದಿನ ತಮ್ಮ ಮೈಯನ್ನು ತಾವೇ ಉಜ್ಜಿಕೊಳ್ಳುತ್ತಿದ್ದರು. ಅವರು ಬಂದಂದಿನಿಂದ ಶಮಸುದ್ದೀನ ಸಾಹೇಬ ಮತ್ತು ಉಳಿದವರೊಡನೆ ಮಾತುಕತೆ ನಡೆದಿವೆ. ರಾಮಗಂಜದಲ್ಲಿ ರಾಮಗಂಜದ ಹಿಂದು ಮುಸಲ್ಮಾನ ಸುಮಾರು ೩೦ ಜನ ಪ್ರತಿನಿಧಿಗಳೊಡನೆಯೈ ಚರ್ಚೆ ನಡೆಸಿದರು, ತತ್ಪರಿಣಾಮವಾಗಿ ಅವರು ಶಾಂತಿ ಮತ್ತು ಜಾತೀಯ ಸೌಹಾರ್ದ ಸ್ಥಾಪನೆಗಾಗಿ ಒಂದು ಯೋಜನೆಯನ್ನು ಮಾಡಿರುವರು. ಅದನ್ನು ಕಾರ್ಯಕಾರೀ ಮಾಡಲು ಮಂತ್ರಿಗಳ ವಚನ ತೆಗೆದುಕೊಂಡರು. ನವಂಬರ ೨೩ ಕ್ಕೆ ಚಾಂದಪುರದಲ್ಲಿ ಕೂಡಿದ ಸಾರ್ವಜನಿಕ ಸಭೆಯಲ್ಲಿ ಸಾರ್ವಜನಿಕರ ಮುಂದೆ ಆ ಯೋಜನೆಯು ನ್ನಿಡಲಾಯಿತು. ಈ ಸಭೆಯ ಅಧಿಕೃತ ವರದಿಯನ್ನು ಬೇರೆಕಡೆ ಪ್ರಸಿದ್ಧಿಸಿದೆ.

ಗಾಂಧೀಜಿ ಸಭೆಯ ಕೊನೆಯಲ್ಲಿ ಒಳ್ಳೆ ಅರ್ಥಪೂರ್ಣ ಭಾಷಣ ಮಾಡಿದರು. "ಪ್ರಾಂತದ ಆಡಳಿತವನ್ನು ಸಾಗಿಸುತ್ತಿರುವ ಸರಕಾರದ ಆರಿಸಲ್ಪಟ್ಟ ಮುಸಲ್ಮಾನ ಪ್ರತಿನಿಧಿಗಳು ಇಲ್ಲಿರುವರು. ಅವರು ನಿಮಗೆ ವಚನವನ್ನು ಕೊಟ್ಟಿರುವರು. ನಾಚಿಕೆಗೇಡಾದ ಕೃತ್ಯಗಳ ಪುನರಾವರ್ತಿಯಾಗುವದನ್ನು ಅವರು ಮೌನದಿಂದ ನೋಡುತ್ತ ಕೂಡಲಾರರು. ಅವರ ಮಾತನ್ನು ನಂಬಿ ಅದನ್ನು ವರೆಗೆ ಹಚ್ಚಬೇಕೆಂದು ನಾನು ಹಿಂದುಗಳಿಗೆ ಬಿನ್ನವಿಸುಕೊಳ್ಳುತ್ತೇನೆ. ಪೂರ್ವ ಬಂಗಾಲದಲ್ಲಿ ಒಬ್ಬನಾದರೂ ಕೆಟ್ಟ ಮುಸಲ್ಮಾನನಿರಲಿಕ್ಕಿಲ್ಲೆಂದು ಇದರ ಅರ್ಥವಲ್ಲ. ಎಲ್ಲ ಜಾತಿಗಳಲ್ಲಿಯೂ ಸಭ್ಯ ಮತ್ತು ಅಸಭ್ಯ ಜನರಿರುವರು. ಆಯೋಗ್ಯ ರೀತಿಯಿಂದ ಆಡಳಿತ ಸಾಗಿಸಿದರೆ ಎಂಥ ಮಂತ್ರಿ ಮಂಡಳ ಇಲ್ಲವೆ ಸಂಸ್ಥೆ ಕೊನೆಯಲ್ಲಿ ವಿನಾಶಗೊಳ್ಳುವದು.

"ನಿಮಗೆ ನಿಜವಾದ ಶಾಂತಿ ಬೇಕಾಗಿದ್ದರೆ ಪರಸ್ಪರರಲ್ಲಿ ವಿಶ್ವಾಸ ಮತ್ತು ಪ್ರೇಮದ ಹೊರತು ಅನ್ಯಮಾರ್ಗವಿಲ್ಲ. ನೌಖಾಲಿಯ ಸೇಡು ಬಿಹಾರ ತೀರಿಸಿಕೊಂಡಿತೆಂದು ಹೇಳುತ್ತಿರುವರು. ಪೂರ್ವ ಬಂಗಾಲದ ಮುಸಲ್ಮಾನರು ಅಥವಾ ಇಡೀ ಹಿಂದುಸ್ತಾನದಲ್ಲಿಯ ಮುಸಲ್ಮಾನರು ಬಿಹಾರದ ಸೇಡುತೀರಿಸಿಕೊಳ್ಳಲು ಉದ್ಯುಕ್ತರಾದರೆ ಹಿಂದುಸ್ತಾನದ ಪರಿಸ್ಥಿತಿ ಏನಾಗಬಲ್ಲದು? ತೀರ ಕೆಟ್ಟ ಕೃತ್ಯ ಸಂಭವಿಸಿತೆಂದು ತಿಳಿದರೂ ಆಗುವದೇನು? ನೀವು ನಿಮ್ಮ ಪ್ರಾಣಕ್ಕೆರವಾಗಬೇಕಾಗುವದು. ಆದರೆ ಶೂರರಂತೆ ನೀವು ಮರಣವನ್ನು ಅಪ್ಪಿಕೊಳ್ಳಬೇಕು."

"ಶಮಸುದ್ದೀನ ಸಾಹೇಬರು ಮತ್ತು ಅವರ ಸಂಗಡಿಗರು ತಾವಾಡಿದಂತೆ ನಡೆಯಲು ಸಿದ್ಧರ್‍ಆಗದಿದರೆ ನಿಮಗೆ ಅದು ಗೊತ್ತಾಗುವದು. ಆದರೆ

### ಬ್ರಿಟಿಶ್ ಧೋರಣ

ಪತ್ರಲೇಖಕನೊಬ್ಬನು ಕೆಳಗಿನ ಬರಹವನ್ನು ಕಳಿಸುತ್ತಾನೆ—

'ಸದ್ಯದ ಕೊನೆಯಿಲ್ಲದ ದೊಂಬಿಯ ಕಾರಣಗಳನ್ನು ತಿಳಿದುಕೊಳ್ಳುವುದಕ್ಕಾಗಿ, ಕಳೆದವಾರ ನಿಮ್ಮನ್ನು ಹೊಸದಿಲ್ಲಿಯಲ್ಲಿ ಕಂಡ ಪ್ರಮುಖ ಬ್ರಿಟಿಶ ದಿನಪತ್ರಿಕೆಯ ಸಂಚಾಲಕರು ಕೆಳಗೆ ಬರೆದುದನ್ನು ಅವಲೋಕಿಸುವದು ಉಚಿತವಾಗುವದು.

ವಾಯಿಸರಾಯ ದೊರೆಗಳು ತಮ್ಮ ಗುರು ಆಲೆನ್ಬಿಯವರ ಮಾರ್ಗವನ್ನು ಶ್ರದ್ಧಾಪೂರ್ವಕ ಮತ್ತು ದೃಢವಾಗಿ ಅನುಸರಿಸುತ್ತಿರುವರು. ಅವಲೋಕನೆಗಾಗಿ ಅದನ್ನು ಕೆಳಗೆ ಉದ್ಧರಿಸುತ್ತೇನೆ.

"ಇಜಿಪ್ತದ ಜನರಿಗೆ ಸ್ವರಾಜ್ಯ ಕೊಡುವ ನಮ್ಮ ನಿಶ್ಚಿತ ಧೋರಣೆಯು ಸತ್ಯಪೂರ್ಣವಾಗಿದ್ದರೆ ಮತ್ತು ಅರ್ಥಪೂರ್ಣವಾಗಿದ್ದರೆ ಅದರಲ್ಲಿ ಕೈಹಾಕುವದು ಮತು, ಏನಾದರೂ ಅಡಚಣೆ ಬಂದಕೂಡಲೆ ಎಲ್ಲವನ್ನೂ ಒಬ್ಬನೇ ತನ್ನ ಕೈಯಲ್ಲಿ ತೆಗೆದುಕೊಳ್ಳುವದು ನಿರರ್ಥಕ. ಮಂತ್ರಿಗಳಿಗೆ ಮತ್ತು ಅಧಿಕಾರಿಗಳಿಗೆ ಆಡಳಿತೆ ಸಾಗಿಸುವ ಅನುಭವ ಬರಬೇಕಾಗಿದ್ದರೆ, ಶಾಂತಿ ಸುವ್ಯವಸ್ಥೆಯನ್ನು ಯೋಗ್ಯರೀತಿಯಿಂದ ಕಾಯ್ದುಕೊಳ್ಳಲು ಪೋಲೀಸರು ತರಬೇತಿಹೊಂದಬೇಕಿದ್ದರೆ, ಅವಶ್ಯಕ ಪ್ರಸಂಗದಲ್ಲಿ ತಮ್ಮ ಸರಕಾರಕ್ಕೆ ಇಜಿಪ್ತ ಸೈನ್ಯದ ಸಹಾಯ ಬೇಕಾಗಿದ್ದರೆ, ಅವರೆಲ್ಲ ತಮ್ಮ ಅಡಚಣೆಗಳನ್ನು ತಿಳಿದುಕೊಳ್ಳಬೇಕಲ್ಲದೆ ಎಲ್ಲವನ್ನೆದುರಿಸಲಿಕ್ಕೆ ಬೇಕು; ಗಂಡಾಂತರಗಳನ್ನು ಅವರೇ ನಿವಾರಿಸಿಕೊಳ್ಳಬೇಕು; ತದ್ವಿರುದ್ಧವಾಗಿ ಏನಾದರೂ ಗಂಡಾಂತರದ ಇಲ್ಲವೆ ಅಶಾಂತತೆಯ ಪರಿಸ್ಥಿತಿಯುಂಟಾದ ಕೂಡಲೆ ಬ್ರಿಟಿಶ್‌ರನ್ನು ಅವರು ಅವಲಂಬಿಸಕೂಡದು." (ವೇವೆಲ್ಲರು ಬರೆದ ಆಲೆನ್ಬಿ ಚರಿತ್ರ ಪುಟ ೪೯—೫೦ )

ಇದರಲ್ಲಿ ಇಜಿಪ್ತದ ಜನರೆಂದಿದ್ದಲ್ಲಿ ಭಾರತೀಯರು ಎಂದು ಓದತಕ್ಕದ್ದು. ಅನಂತರ ಮೇಲೆ ಬರೆದ ಧೋರಣಕ್ಕೆ ನಾವು ಮಹತ್ವಕೊಡಲಿಕ್ಕೆ ಬೇಕು. ಹೀಗಿದ್ದರೂ ಕಳೆದ ಎರಡುವಾರ ಅಧಿಕಾರಿಗಳು ಪರಿಸ್ಥಿತಿಯಲ್ಲಿ ಕೈಹಾಕಬೇಕೆಂಬ ಬಗ್ಗೆ ಎಷ್ಟೊಂದು ದಯಾಪೂರಿತ ಬಿನ್ನಹ ಮಾಡಿಕೊಳ್ಳಲ್ಪಟ್ಟಿತೆಂಬುದನ್ನು ನಾವು ನೋಡಿರುವೆವು. ಇದು ನಿಮ್ಮ ಮತವನ್ನು ಸಿದ್ಧಪಡಿಸುತ್ತದೆ. ಆದರೆ ಇದನ್ನು ಪರಿಪೂರ್ಣಗೊಳಿಸಬೇಕಾದರೆ ಮತ್ತು ವಿವಾದಿಗಳನ್ನೆಲ್ಲ ಒಮ್ಮೆ ನಿರುತ್ತರಗೊಳಿಸಿ ಬಿಡಬೇಕಾದರೆ, ಕೆಳಗಿನದನ್ನು ಅವಲೋಕಿಸುವದು ಪ್ರಯೋಜನಕರವಾಗಿದೆ.

"೧೯೨೧ ನೆಯ ಇಸ್ವಿಯ ಮೇ ೨೦ ಕ್ಕೆ ತಮ್ಮ ತಾಯಿಗೆ ಬರೆದ ಪತ್ರದಲ್ಲಿ ( ಕೆಲ ದೊಂಬಿಗಳು ಸಂಭವಿಸಿದ ನಂತರ ) ಆಲೆನ್ಬಿಯವರು ಹೀಗೆ ಬರೆದರು" ಇಜಿಪ್ತ ಜನರು ತಮ್ಮ ರಾಜಕಾರಣವನ್ನು ತಾವೇ ಬಗೆಹರಿಸಿಕೊಳ್ಳಬೇಕೆಂದು ನನ್ನ ಮನೀಷೆ ಇದ್ದುದರಿಂದ ನಾನು ಸಮಯ ಕಾಯುತ್ತಿರುವೆನು. ಯುರೋಪಿಯನ್ನರ ವಿತ್ತ ಜೀವಿತಗಳು, ಹಿತಸಂಬಂಧಗಳು ಗಂಡಾಂತರದಲ್ಲಿ ಬೀಳುವವರೆಗೆ ನನ್ನ ಸೈನಿಕರ ಕೈವಾಡ ನಡೆಸುವ ಇಚ್ಛೆ ನನಗೆ ಇಲ್ಲ."

ಇದು ಸುಸ್ಪಷ್ಟವಿದೆ ಮತ್ತು ಎಲ್ಲರ ಮನವರಿಕೆಯಾಗುವಂತಿದೆ. ನೀವು ಹಿಂದೊಮ್ಮೆ ಹೇಳಿದಂತೆ ಹಿಂದುಸ್ತಾನವನ್ನು 'ಪರಮಾತ್ಮನ ಕೈಯಲ್ಲಿ ಇಲ್ಲವೆ ಅವ್ಯವಸ್ಥಿತ ಸ್ಥಿತಿಯಲ್ಲಿ ಬಿಟ್ಟುಗೊಟ್ಟು ಹೊರಡಿರೆಂದು ತನ್ನ ಬಂಧುಬಳಗದವರಿಗೆ ಮತ್ತು ಪ್ರಭುತ್ವದವರಿಗೆ ಅರುಹಬೇಕೆಂದು ಈ ಪತ್ರಿಕಾಲೇಖಕಮಿತ್ರನಿಗೆ ಸಲಹೆ ಕೊಡಬೇಕೆಂದು ನಾನು ಆಶಿಸುತ್ತೇನೆ. ಇದೊಂದೇ ಬಿಕ್ಕಟ್ಟು ಬಿಡಿಸುವ ಮಾರ್ಗ. ಆದರೆ ದುರ್ದೈವದಿಂದ ಅದನ್ನು ಜಾರಿಯಲ್ಲಿ ತರುವದನ್ನು ಯಾವಾಗಲೂ ವಿಲಂಬಿಸಲಾಗುತ್ತದೆ. ಬ್ರಿಟಿಶ್ ಸೈನಿಕರು ಇನ್ನೂ ಇಜಿಪ್ತ ಬಿಟ್ಟು ಹೊರಟಿರುವದಿಲ್ಲ."

ಇಂಥ ದುರಂತವನ್ನು ನೋಡುವ ಮೊದಲು ನನ್ನ ಕಣ್ಣುಗಳು ಮುಚ್ಚಲೆಂದು ಬಯಸುತ್ತೇನೆ."

ಶ್ರೀರಾಮಪೂರ ಪ್ಯಾರೇಲಾಲ

೨೪—೧೧—೪೬

# ನಾರದ ಪತ್ರ

## ಆ ಪಾಠ

ಹಿಂದೂ ಕಾರ್ಯಕರ್ತರು ಗಾಂಧೀಜಿಯನ್ನು ಚಾಂದಪುರದಲ್ಲಿ ಕಂಡಾಗ ಪ್ರಾರಂಭಿಸಿದ ನಿರ್ಭೀತಿಯ ಪಾಠವನ್ನು ಚೌಮುಹಾನಿಯಲ್ಲಿಯೂ ಬೇರೆ ಕಡೆಗಳಲ್ಲಿಯೂ ಅವರು ಇನ್ನಷ್ಟು ಹುರುಪಿನ ಭಾಷೆಯಲ್ಲಿ ಮುಂದುವರಿಸಿದರು. ವಸ್ತುತಸ್ತು, ಅವರ ಎಲ್ಲ ಭಾಷಣಗಳಿಗೂ ಅದೇ ಮುಖ್ಯ ಪ್ರಮೇಯವಾಗಿಬಿಟ್ಟಿದೆ. "ಇಷ್ಟೆಲ್ಲ ಮುಸ್ಲಿಮರು ತಲೆಕೆಟ್ಟವರಾದರೆಂಬುದು ಅಷ್ಟು ದುಃಖದ ಸಂಗತಿಯಲ್ಲ," ಎಂದು ಗೆಳೆಯರೊಬ್ಬರು ಚೌಮುಹಾನಿಯಲ್ಲಿ ಅವರನ್ನು ಕಾಣ ಬಂದಾಗ ಗಾಂಧೀಜಿ ಹೇಳಿದರು. "ಆದರೆ ಪೂರ್ವ ಬಂಗಾಲದ ಇಷ್ಟೆಲ್ಲ ಹಿಂದುಗಳು ಈ ಘಟನೆಗಳನ್ನು ಕಣ್ಣಾರೆ ನೋಡುತ್ತ ಕುಳಿತರೆಂಬುದೀಗ ವಿಷಾದದ ಮಾತು. ಪೂರ್ವ ಬಂಗಾಲದಲ್ಲಿದ್ದ ಪ್ರತಿಯೊಬ್ಬ ಹಿಂದುವನ್ನು ಕೊಂದು ಹಾಕಿದ್ದರೂ ನಾನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ರಜಪೂತರು ಏನು ಮಾಡುತ್ತಿದ್ದರು ಗೊತ್ತಿದೆಯೆ? ತಾವು ರಣರಂಗದಲ್ಲಿ ಪ್ರಾಣಾಹುತಿ ಕೊಡಲು ಹೊರಹೊರಡುವಾಗ ತಮ್ಮ ಸ್ತ್ರೀಜನರನ್ನು ಕೊಲ್ಲುತ್ತಿದ್ದರು. ಅಳಿದುಳಿದವರು ಕೋಟೆ ಶತ್ರುವಶವಾಗುವದಕ್ಕಿಂತ ಮುಂಚೆ, ಚಿತೆಯನ್ನೇರಿ ಆತ್ಮಹತ್ಯೆಮಾಡಿಕೊಳ್ಳುತ್ತಿದ್ದರು ಹೊರತು ಶತ್ರುಗಳ ಕೈಗೆ ಬಿದ್ದು ಅವಮಾನವನ್ನು ಸಹಿಸಲು ಸಿದ್ಧರಾಗುತ್ತಿದ್ದಿಲ್ಲ. ಸಾವಿರಾರ ಮುಸ್ಲಿಮರು ಸೇರಿ ತಮ್ಮ ನಡುವೆ ಸಿಕ್ಕಿಕೊಂಡ ಕೈಬೆರಳಲ್ಲೆಣಿಸುವಷ್ಟು ಹಿಂದುಗಳನ್ನು ಕೊಲ್ಲುವದರಲ್ಲಿ ಏನೂ ಶೌರ್ಯವಿಲ್ಲ. ಆದರೆ ಹಿಂದುಗಳು ತಮ್ಮ ಕಣ್ಮುಂದೆ ನಡೆದ ಕನ್ಯಾಕಾರ, ಸತೀತ್ವಹರಣ, ಬಲುಮೆಯ ಮತಾಂತರ, ಬಲುಮೆಯ ಮದುವೆಗಳನ್ನು ನೋಡುತ್ತ ಉಳಿದು ಪ್ರದರ್ಶಿಸಿದ ಅತ್ಯಂತ ನೀಚ ಹೇಡಿತನವೇ ಹೃದಯವಿದ್ರಾವಕವಾಗಿದೆ."

"ಸುರಕ್ಷಿತತೆಯ ಭಾವನೆಯನ್ನು ಆತ್ಮವಿಶ್ವಾಸವನ್ನು ಉಂಟುಮಾಡುವ ಬಗೆ ಹೇಗೆ?" ಗೆಳೆಯ ಕೇಳಿದ.

"ಶೂರರಾಗಿ ಸಾಯಲು ಕಲಿಯುವ ಮೂಲಕ. ನಿಮ್ಮ ಕ್ರೋಧವನ್ನು ನಿಮ್ಮಗಳ ಮೇಲೆಯೇ ತಿರುಗಿಸಿಕೊಳ್ಳಿರಿ. ಪೋಲೀಸರನ್ನು ತೆಗೆದು ಸೈನಿಕರನ್ನು ಅಥವಾ ಮುಸ್ಲಿಂ ಪೋಲೀಸರ ಸ್ಥಾನದಲ್ಲಿ ಹಿಂದೂ ಪೋಲೀಸರನ್ನು ಸ್ಥಾಪಿಸುವದರಲ್ಲಿ ನನಗೇನೂ ಆಸ್ಥೆಯಿಲ್ಲ. ಅದು ಮುಮುಕ್ಷು ಊರುಗೋಲು."

"ನಾವು ಯಾರಿಗೆ ಮೊರೆ ಹೋಗಬೇಕು—ಕಾಂಗ್ರೆಸ್ಸಿಗೋ, ಲೀಗಿಗೋ ಬ್ರಿಟಿಶ ಸರಕಾರಕ್ಕೋ?"

"ಇವರಾರಿಗೂ ಅಲ್ಲ—ದೇವರ ಸನ್ನಿಧಿಯಲ್ಲಿ ನಿಮ್ಮ ಹೃದಯಗಳಿಗೇ ನೀವು ಮೊರೆಹೋಗಿರಿ."

"ನಾವು ಮನುಷ್ಯರು-ರಕ್ತಮಾಂಸವುಳ್ಳವರು. ನಮಗೆ ಏನಾದರೂ ಪಾರ್ಥಿವ ಅವಲಂಬನ ಬೇಕು," ಕೊನೆಗೆ ಆ ಗೆಳೆಯ ನುಡಿದ.

"ಹಾಗಾದರೆ ನಿಮ್ಮ ರಕ್ತಮಾಂಸಗಳಿಗೆ ಮೊರೆಹೋಗಿರಿ. ಅವುಗಳಲ್ಲಿರುವ ಎಲ್ಲ ಕಲಂಕ ಕಲ್ಮಷಗಳನ್ನು ತೊಳೆದು ಪರಿಶುದ್ಧ ಮಾಡಿರಿ."

## ಭೀತಿಯ ಗುಣಧರ್ಮ

ತಾ. ೧೮ ಕ್ಕೆ (ಸೋಮವಾರ) ಕಾಝಿರಖಿಲದಲ್ಲಿ ಸೇರಿದ ಪ್ರಾರ್ಥನಾ ಸಭೆಗೆ ಕೊಟ್ಟ ಲಿಖಿತ ಸಂದೇಶದಲ್ಲಿ ಅವರು ಭೀತಿಯ ಗುಣಧರ್ಮವನ್ನು ಸೂಕ್ಷ್ಮವಾಗಿ ಬಣ್ಣಿಸಿದರು. ನಿಜವಾಗಿ ಅದೀಗ ಅವರ ಎಲ್ಲ ಭಾಷಣಗಳ ಮುಖ್ಯ ವಸ್ತುವಾಗಿ ಬಿಟ್ಟಿದೆ "ಈ ಭಾಗಗಳಲ್ಲಿ ನಾನು ಸಂಚರಿಸುತ್ತ ಹೋದಂತೆ, ನಿಮ್ಮ ಮಹಾ ಶತ್ರುವೆಂದರೆ ಭೀತಿಯೆಂದು ಖಚಿತವಾಗುತ್ತ ಹೋಗುತ್ತಿದೆ," ಎಂದು ಬರೆದಿದ್ದರವರು. "ಅದು ಭೀತಿಗ್ರಸ್ತನ ಹೃದಯವನ್ನು ಹೇಗೂ ಹಾಗೆಯೆ ಭೀತಿಪ್ರದರ್ಶಕನವನ್ನೂ ಕೊರೆಯುವದು. ಭಯ ಪ್ರದರ್ಶಕನೂ ತನ್ನ ಹಿಂಸೆಗೆ ಗುರಿಯಾದವನಿಗೆ ಏಕೋ ಹೆದರುತ್ತಾನೆ. ಅವನ ಧರ್ಮ ಭೇರೆಯಾಗಿದ್ದುದರಿಂದ ಇರಬಹುದು ಅಥವಾ ಅವನ ಸಂಪನ್ನತೆಯ ಕಾರಣದಿಂದಿರಬಹುದು. ಎರಡನೆ ಬಗೆಯ ಭೀತಿಯನ್ನು ದುರಾಶೆಯಿಂದ ಕರೆಯಬಹುದು. ಚೆನ್ನಾಗಿ ಪರಿಶೋಧಿಸಿದರೆ ದುರಾಶೆಯೂ ಒಂದು ಬಗೆಯ ಭೀತಿಯೆಂಬದನ್ನು ನೀವು ಕಂಡುಕೊಳ್ಳದಿರಲಾರಿರಿ. ಆದರೆ ಭಯವನ್ನು ಹೃದಯದಿಂದ ಕಿತ್ತೊಗೆದವನನ್ನು ಬಗ್ಗಿಸಬಲ್ಲ ಮನುಷ್ಯನು ಈ ವರೆಗೆ ಹುಟ್ಟಿಲ್ಲ, ಇನ್ನು ಹುಟ್ಟಲಾರ. ನಿರ್ಭಯರನ್ನು ಯಾರೂ ಬಗ್ಗಿಸಲಾರರೇಕೆ? ನಿರ್ಭಯರಪಕ್ಷದಲ್ಲಿ ದೇವರು ಯಾವಾಗಲೂ ಕಾವಲಿರುವನೆಂದು ನೀವು ಕಂಡುಕೊಳ್ಳುವಿರಿ. ಆದುದರಿಂದ ನಾವು ಆತನೊಬ್ಬನಿಗೇ ಹೆದರಬೇಕು ಮತ್ತು ಅವನ ರಕ್ಷಣೆಯನ್ನೇ ಕೋರಬೇಕು. ಆಗ ಬೇರೆ ಎಲ್ಲ ಬಗೆಯ ಭಯವೂ ತಂತಾನೆ ಮಾಯವಾಗುವದು. ಜನರು ನಿರ್ಭಯತೆಯನ್ನು ಸಾಧಿಸಿಕೊಳ್ಳದಿದ್ದರೆ ಈ ಭಾಗಗಳಲ್ಲಿ ಹಿಂದುಗಳಿಗಾಗಲಿ ಮುಸಲ್ಮಾನರಿಗಾಗಲಿ ಶಾಂತಿ ದೊರಕಲಾರದು.

## ಒಂದು ನಿರ್ದಾಕ್ಷಿಣ್ಯ ವಾಕ್ಯ

ನಾಗರಿಕ ಪೂರೈಕೆ ಮಂತ್ರಿಗಳಾದ ಗೊಫ್ರಾನ ಸಾಹೇಬರೂ ಕೃಷಿಮಂತ್ರಿಗಳಾದ ಅಹಮದ್ ಹುಸೇನ ಸಾಹೇಬರೂ ಅನೇಕ ಉಪ ಮಂತ್ರಿಗಳನ್ನೂ ಮುಸ್ಲಿಂ ಲೀಗ ಗೆಳೆಯರನ್ನೂ ಕೂಡಿಕೊಂಡು ತಾ. ೧೭ ನೇ ದಿನ ಸಂಜೆ ಸರಕಾರದ ಪುನರ್ವಸತಿ ಯೋಜನೆಯನ್ನು ಚರ್ಚಿಸಲು ಗಾಂಧೀಜಿಯನ್ನು ಭೆಟ್ಟಿಯಾದರು. ಪ್ರಾರ್ಥನೆ ಮುಗಿದ ಮೇಲೆ ನೌಖಾಲಿ ಜಿಲ್ಹೆಯವರಾಗಿದ್ದು ಮಂತ್ರಿಗಳಾಗುವ ಮೊದಲು ಇಲ್ಲಿ ಸರಕಾರಿ ವಕೀಲರಾಗಿದ್ದ ಗೊಫ್ರಾನ ಸಾಹೇಬರು ಸಭೆಯಲ್ಲಿ ಭಾಷಣ ಮಾಡಿದರು. ಈ ಜಿಲ್ಹೆಯಲ್ಲಿ ನಡೆದುದನ್ನು ಕಂಡು ತಮಗೆ ಮಾತ್ರವಲ್ಲ ಇಡಿ ಪೂರ್ವ ಬಂಗಾಲದ ಮುಸಲ್ಮಾನರಿಗೆ ಗಾಢ ವ್ಯಥೆಯಾಗಿದೆಯೆಂದು ಅವರು ಹೇಳಿದರು. ತಾ. ೧೬ ರಿಂದ ತಾವು ಸಂತ್ರಸ್ತ ವಿಭಾಗದಲ್ಲಿ ಸಂಚರಿಸಿದ್ದು, ತಾ. ೧೦ ರಿಂದ ೧೬ ರ ವರೆಗೆ ಪ್ರಸ್ತುತ ಘಟನೆಗಳು ಸಂಭವಿಸಿದ್ದವೆಂದು ನಿರ್ಧಾರವಾಗಿ ತಿಳಿದಿದೆ. ಪೂರ್ವ ಬಂಗಾಲದಲ್ಲಿ ಅತ್ಯಾಚಾರಗಳು ಜರಗಿಸಲ್ಪಟ್ಟಿದ್ದವೆಂಬುದರಲ್ಲಿ ಸಂದೇಹವೇ ಇರಲಿಲ್ಲ. ದುಷ್ಕರ್ಮಿಗಳನ್ನು ದಂಡಿಸಬೇಕೆಂದು ತಮಗೆ ತುಂಬಾ ಆತುರವಿದ್ದರೂ ನಿರಪರಾಧಿಗಳು ಸಂಕಟಕ್ಕೆ ಗುರಿಯಾಗಬಾರದೆಂದೂ ತಮಗೆನಿಸುತ್ತದೆ. ಬಿಹಾರ, ಯುಕ್ತಪ್ರಾಂತ, ಮಧ್ಯಪ್ರಾಂತ, ಮದ್ರಾಸ, ಮುಂಬಯಿಗಳಲ್ಲಿರುವ ಮುಸ್ಲಿಮರು ತಮ್ಮ ಮನೆ ಮಾರು ಬಿಟ್ಟು ಬೇರೆಲ್ಲಾದರೂ ಹೋಗಬೇಕೆಂದು ಕಾಂಗ್ರೆಸ್ಸಿಗೆ ಹೇಗೆ ಇಚ್ಛೆಯಿಲ್ಲವೊ ಹಾಗೆಯೆ ಹಿಂದುಗಳು ಪೂರ್ವ ಬಂಗಾಲಬಿಟ್ಟು ಹೋಗಬೇಕೆಂದು ಸರಕಾರಕ್ಕಾಗಲಿ ಮುಸ್ಲಿಂ ಲೀಗಿಗಾಗಲಿ ಆಸೆಯಿಲ್ಲವೆಂಬುದಾಗಿ ಅವರು ಪೂರ್ವ ಬಂಗಾಲದ ಹಿಂದುಗಳಿಗೆ ಭರವಸೆ ಕೊಟ್ಟರು. ತಾವು ಹುಟ್ಟಿ ಬೆಳೆದ ಪೂರ್ವಬಂಗಾಲವನ್ನು ಬಿಟ್ಟು ಹೋಗಲು ಅವರು (ಹಿಂದುಗಳು) ಹೇಗೆ ತಾನೆ ಆಶೆಪಟ್ಟಾರು? ಹಿಂದುಗಳೂ ಮುಸಲ್ಮಾನರೂ ಎಂದಿನಿಂದಲೂ ಗೆಳೆತನದಿಂದ ಬಾಳಿ ಬಂದಿದ್ದಾರೆ. ಹಿಂದುಗಳು ತಮ್ಮನ್ನು (ಗೊಫ್ರಾನಸಾಹೇಬರನ್ನು) 'ಭಾಯಿ' "ಕಾಕಾ" ಎಂದು ಮುಂತಾಗಿ ಕರೆಯುತ್ತಾರೆ. ಇವರಿಬ್ಬರಲ್ಲಿ ಈಗ ಮಾತ್ರ ಏಕೆ ವೈರವುಂಟಾಗಬೇಕು? ಆದುದರಿಂದ ಹಿಂದುಗಳು ನಿರ್ಭಯರಾಗಿ ತಮ್ಮ ತಮ್ಮ ಮನೆಗಳಿಗೆ ಮರಳಬೇಕೆಂದು ಮುಸ್ಲಿಮರ ಪರವಾಗಿ ತಾವು ಕೇಳಿಕೊಳ್ಳುವದಾಗಿ ಅವರು ಹೇಳಿದರು. ವಿಶ್ವಾಸ ನೆಲೆಗೊಂಡೊಡನೆ ಪೋಲೀಸರನ್ನೂ ಸೈನಿಕರನ್ನೂ ತಿರುಗಿ ಕರೆಸಲಾಗುವದು. ನಿಜವಾಗಿ ಹಿಂದುಗಳಿಗಾಗಲಿ, ಮುಸ್ಲಿಮರಿಗಾಗಲಿ ಅವುಗಳಲ್ಲಿ ವಿಶೇಷ ವಿಶ್ವಾಸವಿಲ್ಲ. ಹಿಂದುಗಳು ತಮ್ಮ ಮನೆಗಳಿಗೆ ಮರಳುವಂತೆ ಮುಸ್ಲಿಮರು ಆಗ್ರಹ ಮಾಡಬೇಕೆಂದು ಮಂತ್ರಿವರ್ಯರು ಅಪೇಕ್ಷಿಸಿದರು.

ಇಷ್ಟು ಹೊತ್ತಿಗೆ ನಮಾಜಿನ ಹೊತ್ತಾದುದರಿಂದ ಸಭೆಯನ್ನು ಕೆಲಹೊತ್ತು ತಡೆಹಿಡಿಯಬೇಕಾಯಿತು. ಚೌಮುಹಾನಿಯಲ್ಲಿ ಹೇಗೊ ಹಾಗೆ ಇಲ್ಲಿಯೂ ಮುಸ್ಲಿಂ ಶ್ರೋತೃಗಳು ಪ್ರಾರ್ಥನಾಂಗಣದ ಒಂದು ಪಕ್ಕದಲ್ಲಿ ಸೇರಿ ನಮಾಜು ಮಾಡಿದರು. ನಮಾಜು ಮುಗಿದ ಮೇಲೆ ಗೋಫ್ರಾನ ಸಾಹೇಬರು ಪುನಃ ಕೆಲವು ನಿಮಿಷ ಭಾಷಣ ಮಾಡಿದರು. ಗಾಂಧೀಜಿ ಸಭೆಗೆ ಬರುತ್ತಿರುವಾಗಲಾಗಲಿ, ಸಭೆಯಲ್ಲಾಗಲಿ ಸಭೆಯಿಂದ ಮನೆಗೆ ಮರಳುತ್ತಿರುವಾಗಲಾಗಲಿ ಯಾರನ್ನೂ ಬಂಧಿಸತಕ್ಕದ್ದಲ್ಲವೆಂದು ಆಜ್ಞಾಪಿಸಲಾಗಿದೆಯೆಂದು ಅವರು ತಿಳಿಸಿದರು.

ಗೊಫ್ರಾನ ಸಾಹೇಬರ ನಂತರ ಸಭೆಯಲ್ಲಿ ಭಾಷಣ ಮಾಡುತ್ತ, ಗಾಂಧೀಜಿಯವರು ಚೌಮುಹಾನಿಯಲ್ಲಿ ಶಮಸುದ್ದೀನ ಸಾಹೇಬರು ಮಾಡಿದ ಭಾಷಣದ ಪ್ರಸ್ತಾವನೆತ್ತಿಕೊಂಡು ಪ್ರಾರಂಭಿಸಿದರು. "ಈಗ ಗೋಫ್ರಾನ ಸಾಹೇಬರು ಮಾತನಾಡಿದ್ದನ್ನು ಕೇಳಿಕೊಂಡಿದ್ದೀರಿ. ನೀವು ಗೆಳೆಯರಾಗಿ ಒಟ್ಟಿಗೆ ಬಾಳಬೇಕೆಂದು ಮಂತ್ರಿಗಳು ಆಶಿಸುತ್ತಾರೆ. ಪೋಲೀಸರೂ ಸೈನಿಕರೂ ನಿಮ್ಮನ್ನು ರಕ್ಷಿಸಲಾರರು ಆದುದರಿಂದ ಸುರಕ್ಷಿತತೆಗಾಗಿ ನೀವು ಪರಸ್ಪರರನ್ನು ಅವಲಂಬಿಸಬೇಕಾಗಿದೆ. ಹಿಂದುಗಳು ಪೂರ್ವ ಬಂಗಾಲವನ್ನು ತೊರೆಯಬೇಕೆಂದು ಸರಕಾರ ಬಯಸುವದಿಲ್ಲವೆಂಬದಾಗಿ ಗೊಫ್ರಾನ ಸಾಹೇಬರು ನಿಮಗೆ ಹೇಳಿದ್ದಾರೆ. ಭಯಾನಕ ಘಟನೆಗಳೇನೋ ಸಂಭವಿಸಿದ್ದವು ನಿಜ. ಆದರೂ ನೀವು ಅದದಾಯಿತೆಂದು ಅದನ್ನು ಮುಗಿತುಬಿಡಬೇಕು. ಹೊಸ ಅಧ್ಯಾಯವನ್ನು ಪ್ರಾರಂಭಿಸಬೇಕು. ನಿಮ್ಮಂತೆ ನಾಡು ಪಟ್ಟವರು ಶಂಕೆಗೊಳಗಾಗುವದು ಸಹಜ. ಸಭಿಕರಲ್ಲೊಬ್ಬನು ಗೊಫ್ರಾನಸಾಹೇಬರ ಭಾಷಣಕ್ಕೆ ಉತ್ತರ ಕೊಡಲು ತನಗೆ ಐದು ನಿಮಿಷದ ಅವಕಾಶ ಕೊಡಬೇಕೆಂದು ನನ್ನನ್ನು ಕೇಳಿಕೊಂಡಿದ್ದಾನೆ. ಅವರ ಭಾಷಣವನ್ನು ಎಷ್ಟೋ ಕಡೆಗಳಲ್ಲಿ ತಿದ್ದಬೇಕಾಗಿದೆಯೆಂದು ಅವನ ಹೇಳಿಕೆ. ಆದರೆ ಈ ಸಭೆಯನ್ನು ಬಹಿರಂಗ ವಾದಭೂಮಿಯಾಗಿ ಮಾರ್ಪಡಿಸಬಾರದೆಂದು ನನ್ನ ಅಪೇಕ್ಷೆಯುಂಟು. ಸಭೆಯಲ್ಲಿ ಏನೇನು ಹೇಳಲ್ಪಟ್ಟಿದೆಯೋ ಅದೆಲ್ಲವೂ ಸದಾಶಯದಿಂದ, ತಮ್ಮ ಕಾರ್ಯಕ್ಕೆ ಸಹಾಯಕವಾಗುವ ಗೋಸ್ಕರ ಹೇಳಲ್ಪಟ್ಟಿದೆ. ಆದರೆ ಪ್ರಸ್ತುತಪ್ರಶ್ನಕಾರನು ಅವಿನಯವಿಲ್ಲದ ಭಾಷೆಯಲ್ಲಿ ಪತ್ರ ಬರೆದು ನನಗೆ ಕಳಿಸಿದನಾದರೆ ನಾನವನ್ನು ಸಂತೋಷದಿಂದ ಗೋಫ್ರಾನ ಸಾಹೇಬರಿಗೆ ಮುಟ್ಟಿಸುವೆ." ಮುಸ್ಲಿಂ ಸಭಿಕರು ನಮಾಜ ಮಾಡುತ್ತಿದ್ದಾಗ ಶುದ್ಧ ನಿಸ್ತಬ್ಧತೆಯನ್ನು ಕಾಯ್ದುಕೊಳ್ಳದಿದ್ದಕ್ಕಾಗಿ ಗಾಂಧೀಜಿ ಸಭೆಗೆ ಛೀಮಾರಿ ಹಾಕಿದರು. ಇತರರು ಪ್ರಾರ್ಥನೆ ಮಾಡುತ್ತಿರುವಾಗ ನಿಸ್ತಬ್ಧರಾಗಿರುವದು ಸಂಸ್ಕೃತಿ ಸೌಜನ್ಯಗಳ ಅವಶ್ಯ ಲಕ್ಷಣ. ಪರಸ್ಪರ ಗೌರವಾದರಗಳಿರಬೇಕು. ಅವರವರ ಧರ್ಮವೇನೇ ಇರಲಿ, ಎಲ್ಲರೂ ಆರಾಧಿಸುವ ಪರಮಾತ್ಮನೊಬ್ಬನೆ. ಈ ಪ್ರಾರ್ಥನಾಂಗಣದಲ್ಲಿ ಕಾಂಗ್ರೆಸ್ ಲೀಗ್ ಧ್ವಜಗಳೆರಡೂ ಅಕ್ಕಪಕ್ಕದಲ್ಲಿ ಹಾರಾಡುತ್ತಿರುವದನ್ನು ಕಂಡು ನಮಗೆ ಸಂತೋಷವಾಗಿದೆಂದರು. ಗಾಂಧೀಜಿ, ಅವೆರಡರಲ್ಲೂ ಬಹಳ ಮಹಿಮೆ ಅಡಕವಾಗಿದೆ. "ಕಾಯದೆ ಆಝುಮ ಜಿನ್ನಾರು ಹೇಳಿದಂತೆ ನಾವು ನಮ್ಮೊಳಗೆ ಕಚ್ಚಾಡುತ್ತಲೆ ಇದ್ದರೆ, ದೇಶ ದಾಸದೇಶವಾಗಿಯೇ ಉಳಿದು ಪಾಕಿಸ್ತಾನ, ಗಾಳಿಯಲ್ಲಿ ಹಾರಿ ಹೋಗುವದೆಂಬುದನ್ನು ನೀವು ಅರಿತುಕೊಳ್ಳಬೇಕು," ಎಂದು ಉಪದೇಶಿಸಿದರು. ತಮಗೆ ಹೆದರಿಕೆ ಹಾಕುವ ಪತ್ರಗಳು ಬರುತ್ತಿವೆಯೆಂದು ಗಾಂಧೀಜಿ ಹೇಳಿದರು. ಮುಸ್ಲಿಂರನ್ನು ಶಿಕ್ಷಿಸಲು ತಾವು (ಗಾಂಧೀಜಿ) ಬಂದಿರುವದೆಂದು ಕೆಲವರು ಭಯಗೊಂಡಿರುತ್ತಿದೆ. ತಮ್ಮ ಜೀವಮಾನದಲ್ಲೆಲ್ಲ ತಾವು ಯಾರನ್ನೂ ಹತ್ತಿಕ್ಕಿಲ್ಲವೆಂದು ಅವರು ಭರವಸೆ ಕೊಟ್ಟರು. ಬಿಹಾರಕ್ಕೆ ನೀವೇಕೆ ಹೋಗಿಲ್ಲವೆಂದು ಆ ಪತ್ರಗಳು ಕೇಳುತ್ತಿವೆ. ಬಿಹಾರ ಹುಚ್ಚಾಟ ನಿಲ್ಲಿಸದಿದ್ದರೆ ತಾವು ಉಪವಾಸ ಮಾಡುವದಾಗಿ ಮೊದಲೇ ಪ್ರಕಟಿಸಿದ್ದಲ್ಲದೆ ಬಿಹಾರದೊಡನೆ ಅವಿರತ ಸಂಬಂಧವಿಟ್ಟುಕೊಂಡಿದ್ದೇವೆಂದು ಅವರು ಹೇಳಿದರು. "ಪಂಡಿತ ಜವಾಹರಲಾಲ ಡಾ. ರಾಜೇಂದ್ರಪ್ರಸಾದ ಮೊದಲಾದವರು ಅಲ್ಲಿ ನನ್ನ ಇರವು ಅವಶ್ಯವಿಲ್ಲೆಂದು ಖಚಿತವಾಗಿ ತಿಳಿಸಿದ್ದಾರೆ. ಬಿಹಾರವೀಗ ಹೆಚ್ಚು ಕಡಿಮೆ ಶಾಂತವಾಗಿದೆಂದು ತಿಳಿದುಬಂದಿದೆ. ಇನ್ನೂ ಉದ್ವೇಗವಿದ್ದೇ ಇದೆ. ಆದರೂ ಅದು ಮಾಯವಾಗುತಿದೆ. ಮುಸ್ಲಿಮರು ತಮ್ಮ ಹಳ್ಳಿಗಳಿಗೆ ಮರುಳುತ್ತಿದ್ದಾರೆ. ಮನೆಮಾರು ಕಳೆದುಕೊಂಡವರಿಗೆ ಮನೆ ಕಟ್ಟಿಸಿಕೊಡುವ ಹೊಣೆಯನ್ನು ಸರಕಾರ ಹೊತ್ತಿದೆ. ಬಂಗಾಲದಲ್ಲಿ ನಡೆದುದಕ್ಕಾಗಿ ಮುಸ್ಲಿಮರ ವಿರುದ್ಧ ಉಪವಾಸವನ್ನೇಕೆ ಕೈಕೊಳ್ಳಲಿಲ್ಲವೆಂದು ಸಿಟ್ಟಿನಿಂದ ಕೇಳುವ ತಂತಿಗಳೂ ನನಗೆ ಬರುತಿವೆ. ಇಂದು ಹಾಗೆ ಮಾಡುವದು ಸಾಧ್ಯವಿಲ್ಲ ಮುಸಲ್ಮಾನರೂ ನನ್ನನ್ನು ತಮ್ಮ ಗೆಳೆಯನೆಂದು ಅರಿತುಕೊಂಡರೆ ಅವರ ವಿರುದ್ಧವೂ ಉಪವಾಸ ಕೈಕೊಳ್ಳುವ ಅಧಿಕಾರ ನನಗೆ ಬರುವದು. ನಾನು ಪೂರ್ವಬಂಗಾಲವನ್ನು ಬಿಟ್ಟು ಹೋಗುವದರೆ ಹಿಂದೂ ಮುಸ್ಲಿಮರ ಹೃದಯದಲ್ಲಿ ಶಾಂತಿ ಸಾಮ್ರಾಜ್ಯ ಸ್ಥಾಪಿತವಾದಾಗಲೇ ಹೊರಡುವೆನು. ಇಲ್ಲದಿದ್ದರೆ ಇನ್ನು ಬದುಕುವ ಅಪೇಕ್ಷೆ ನನಗಿಲ್ಲ.

## ದಶ ಘಡಿಯಾ

೧೭ ನೆ ದಿನಾಂಕ ಮುಂಜಾನೆ ಕಾಝಿರಖಿಲದಿಂದ ಎರಡು ಮೈಲು ದೂರದಲ್ಲಿರುವ ದಶ ಘಡಿಯಾ ಗ್ರಾಮಕ್ಕೆ ಗಾಂಧೀಜಿ ಹೋದರು. ಅಲ್ಲಿ ಅನೇಕ ಸ್ತ್ರೀಯರು ಅವರಿಗೆ ಭೆಟ್ಟಿಯಾದರು. ಅವರೆಲ್ಲರೂ ಒತ್ತಾಯದಿಂದ ಧರ್ಮಾಂತರಗೊಳಿಸಲ್ಪಟ್ಟದ್ದು ಈಗ ತಮ್ಮ ಮೂಲ ಧರ್ಮಕ್ಕೆ ಮರಳಿದ್ದರು. ಬಲುಮೆಯ ಧರ್ಮಾಂತರಗಳು, ಅರ್ಥಾತ್ ಭಯದಿಂದ ಧರ್ಮಾಂತರವಾದುದು, ಕಾಯಿದೆಯಿಂದ ಮನ್ನಿಸಲ್ಪಡುವದಿಲ್ಲದೆಂದು ಜಿಲ್ಹಾ ಮ್ಯಾಜಿಸ್ಟ್ರೇಟರು ಆಜ್ಞೆ ಹೊರಡಿಸಿ ಪ್ರಕಟನೆ ತೆಗೆದಿದ್ದರೆಂದು ಗಾಂಧೀಜಿ ಹೇಳಿದರು. ಬಲುಮೆಯಿಂದ ಧರ್ಮಾಂತರಗೊಳಿಸಲ್ಪಟ್ಟವರನ್ನೆಲ್ಲ ಹಿಂದೂ ಧರ್ಮಕ್ಕೆ ಬಿಟ್ಟುಕೊಡಲಾಗಿದೆಯೋ ಇಲ್ಲವೊ ತಮಗಿನ್ನೂ ಗೊತ್ತಿಲ್ಲವೆಂದೂ ಇಲ್ಲದಿದ್ದರೆ ಅವರನ್ನು ಇನ್ನಾದರೂ ಬಿಟ್ಟುಕೊಡುವದು ಎರಡೂ ಜಾತಿಯವರಲ್ಲಿ ಈಗಿರುವ ಮನಸ್ತಾಪವನ್ನು ಹೋಗಲಾಡಿಸಿ ಸೌಹಾರ್ದವನ್ನು ನೆಲೆಗೊಳಿಸಬೇಕಾದರೆ ಅತ್ಯವಶ್ಯವೆಂದೂ ಅವರು ಅಭಿಪ್ರಾಯಪಟ್ಟರು.

ಅಪಹೃತರಾದ ಕೆಲ ಹುಡುಗಿಯರು ಇನ್ನೂ ಸಿಕ್ಕಿಲ್ಲವೆಂದರು ಗಾಂಧೀಜಿ. ಇನ್ನು ವಿಲಂಬವಿಲ್ಲದೆ ಅವರನ್ನು ತಿರುಗಿ ಕೊಡಬೇಕು. ಅಗಸನೊಬ್ಬನು ತನ್ನ ಒಂದು ವರ್ಷದ ಕೂಸನ್ನು ತಮ್ಮ (ಗಾಂಧೀಜಿಯ) ಬಳಿ ತಂದಿದ್ದನು. ಅವನು ಅದನ್ನು ಒಂದು ತಿಂಗಳ ನಂತರ ಒಬ್ಬ ಮುಸ್ಲಿಮನ ಕೈಯಿಂದ ಪೋಲೀಸ ಸಹಾಯದಿಂದ ತಿರುಗಿ ಪಡೆದಿದ್ದನು. ಇಂಥ ಕರ್ಮಗಳಿಗೆ ತಡೆಹಾಕುವದು ಮುಸ್ಲಿಂ ಬಂಧುಗಳ ಕರ್ತವ್ಯ. ಅವರು ಹಿಂದಿನ ತಪ್ಪುಗಳನ್ನೊಪ್ಪಿಕೊಂಡು ಅವುಗಳನ್ನು ಇನ್ನು ಮಾಡುವದಿಲ್ಲವೆಂದು ಮಾತುಕೊಡಬೇಕು. ತನ್ನ ತಪ್ಪುಗಳನ್ನು ಮುಚ್ಚಿಕೊಳ್ಳಲು ಯತ್ನಿಸುವಾತನು ಎಂದೂ ತಿದ್ದಿಕೊಳ್ಳಲಾರ. "ಸ್ವತಃ ನಾನು ಸತ್ಯದ ಉಪಾಸಕ. ವಕೀಲಿ ವೃತ್ತಿ ನಡೆಸುತಿದ್ದಾಗ ಕೂಡ ನಾನು ಅವರ ಪ್ರಕರಣವನ್ನು ತೆಗೆದುಕೊಳ್ಳಬೇಕಾದರೆ ಪಕ್ಷಕಾರರು ನನ್ನ ಮುಂದೆ ಸತ್ಯ ಹೇಳಬೇಕೆಂದು ಹೇಳುತಿದ್ದೆ. ಸುಳ್ಳು ಉದ್ದೇಶಕ್ಕಾಗಿ ವಾದಿಸಲು ನಾನು ಸಿದ್ಧನಿದ್ದಿಲ್ಲ. ಫಲವಾಗಿ ಸತ್ಯವೂ ಸದುದ್ದೇಶಯುಕ್ತವೂ ಆದ ಪ್ರಕರಣಗಳು ಮಾತ್ರ ನನ್ನೆಡೆಗೆ ಬರುತ್ತಿದ್ದವು. ನಾನೀಗ ವಕೀಲಿ ವೃತ್ತಿ ಬಿಟ್ಟು ಬಹಳ ದಿನವಾಯಿತು. ನನ್ನ ಹೆಸರು ಕೂಡ ರಾಜದ್ರೋಹದ ಅಪರಾಧಕ್ಕಾಗಿ ವಕೀಲರ ಯಾದಿಯಿಂದ ತೆಗೆದುಹಾಕಲ್ಪಟ್ಟಿದೆ. ಆದರೆ ನಾನಿನ್ನೂ ಅದೇ ತತ್ವವನ್ನು ಅನುಸರಿಸುತ್ತಿದ್ದೇನೆ. ಹಿಂದೂ ಮುಸ್ಲಿಮರಿಗೆ ನಾನು ಕೊಡುವ ಉಪದೇಶವಿಷ್ಟೆ: ನಿಮ್ಮಲ್ಲಿರುವ ಎಲ್ಲ ದೋಷಗಳನ್ನು ತೊಡೆದು ಹಾಕಿರಿ. ಹಾಗೆ ಮಾಡಿದರೆ ನೀವು ಶಾಂತಿಯಿಂದ ಬಾಳಲೂ ಅರಿವಿರಿ, ಪರಸ್ಪರ ಗೌರವಾದರಗಳನ್ನು ತಾಳಲೂ ಅರಿರಿ."

## ಒಂದು ಘಟನೆ ಮತ್ತು ಅದರ ಪರಿಣಾಮ

ಗೊಫ್ರಾನ್ ಸಾಹೇಬರು ಮಾತಾಡಿದ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿ ಆಡಿದ ಮಾತುಗಳಿಂದ ಕೆಲ ವಿಚಿತ್ರ ಪರಿಣಾಮಗಳಾದವು. ತಾ. ೧೭ ರ ಸಾಯಂಪ್ರಾರ್ಥನೆಗೆ ಸ್ತ್ರೀಯರಾರೂ ಬಂದಿರಲಿಲ್ಲ ಮತ್ತು ಎಲ್ಲೋ ಅಲ್ಪಸ್ವಲ್ಪ ಹಿಂದುಗಳು ಮಾತ್ರವೇ ಬಂದಿದ್ದರು. ಬಂದವರಲ್ಲಿ ಮುಸ್ಲಿಮರೇ ಹೆಚ್ಚಾಗಿದ್ದರು. ಪ್ರಾರ್ಥನಾನಂತರ

(೯ ನೇ ಪುಟ ನೋಡಿ.)

# ಮಾತೆಯ ದುಃಸ್ಥಿತಿ

ಹಿಂದೊಮ್ಮೆ ಅತ್ಯಂತ ಧಾರ್ಮಿಕ ಮಾತೆಯೊಬ್ಬಳಿದ್ದಳು. ಅವಳು ದಿನಾಲು ಹಳ್ಳಿಯಲ್ಲಿಯ ಎಲ್ಲ ಮಂದಿರಗಳನ್ನು ಸಂದರ್ಶಿಸುತ್ತಿದ್ದಳು. ಚರ್ಚ ಮತ್ತು ಮಸೀದೆಯನ್ನು ಕೂಡ ಬಿಡದೆ ಅವಳು ಎಲ್ಲ ದೇವಮಂದಿರಗಳಿಗೆ ಹೋಗಿ ಒಳ್ಳೆ ಭಕ್ತಿಯಿಂದ ನಮಸ್ಕರಿಸುತ್ತಿದ್ದಳು.

ಮನೆಯಲ್ಲಿಯೂ ಅವಳು ವಿಲಕ್ಷಣ ಆಕಾರದ ಕಲ್ಲುಗುಂಡಿ ಮಣಿಗಳು, ನಾಣ್ಯಗಳು ಮೂರ್ತಿಗಳು ಮೊದಲಾದವುಗಳನ್ನು ಸಂಗ್ರಹಿಸಿದ್ದಳು. ಅವುಗಳನ್ನೆಲ್ಲ ದೇವರೆಂದು ಅವಳು ಪೂಜಿಸುತ್ತಿದ್ದಳು. ಕಂಡು ಕೇಳಿದ ಎಲ್ಲ ದೇವರನ್ನು ಅವಳು ಪೂಜಿಸಿದ್ದರೂ ಇವುಗಳೆಲ್ಲದರ ಹಿಂದೆ ಒಬ್ಬನೆ ಒಬ್ಬ ಪರಮಾತ್ಮನಿರುವನೆಂಬುದು ಅವಳಿಗೆ ಗೊತ್ತಿತ್ತು. ಆ ಪರಮಾತ್ಮ ಸರ್ವಶ್ರೇಷ್ಠ ಮತ್ತು ಪ್ರೇಮಮಯನೆಂಬ ಅವರ್ಣನೀಯ ಜ್ಞಾನ ಅವಳಿಗಿತ್ತು. ಮರಣಾನಂತರ ಪುನರ್ಜನ್ಮವಿದೆಂಬ ಅಸ್ಪಷ್ಟ ಕಲ್ಪನೆ ಅವಳಿಗೂ ಇದ್ದಿತು.

ಅವಳ ವಿಚಾರ ಮತ್ತು ಕಲ್ಪನೆಗಳು ಅಸ್ಪಷ್ಟವಾಗಿದ್ದರೂ ಅವನ್ನು ವರ್ಣಿಸುವ ಅವಳ ಶಬ್ದಸಂಪತ್ತು ಅವಕ್ಕೂ ಕಡಿಮೆಯಾಗಿದ್ದರೂ ಕಷ್ಟನಿಷ್ಠುರಗಳನ್ನೆದಿರಿಸುವದಕ್ಕೆ ಅವಳ ಶ್ರದ್ಧೆ, ಆಶೆ, ಪ್ರೀತಿ ಮತ್ತು ಶಕ್ತಿ ಕೊಡಲು ಅವು ಸಾಕಷ್ಟು ಸಮರ್ಥವಾಗಿದ್ದವು. ತನ್ನ ಕರ್ತವ್ಯ ಮಾಡುವದಕ್ಕೆ ಮತ್ತು ಅವಳನ್ನು ಸದ್ಗುಣಿ ಮತ್ತು ಪ್ರಾಮಾಣಿಕಳನ್ನಾಗಿ ಮಾಡಲು ಸಾಕಷ್ಟು ಸಮರ್ಥವಾಗಿದ್ದವು.

ಇದೀಗ ಆ ಮಾತೆಯ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳಿರುವರು. ಅವರೆಲ್ಲರೂ ತಾಯಿಯ ಧಾರ್ಮಿಕ ವಾತಾವರಣದಲ್ಲಿ ಒಳ್ಳೆ ಪ್ರೀತಿಯಿಂದ ಜೋಪಾನ ಮಾಡಲ್ಪಟ್ಟವರು. ಅವರಲ್ಲಿ ಹಲವರು ತಾಯಿಯಂತೆಯೇ ತೀರ ಸಾದಾ ನಿಷ್ಠೆಯವರಾಗಿರುವರು. ಹಲವರು ಶಿಕ್ಷಣ ಪಡೆದಿರುವರು ಬೇರೆ ಬೇರೆ ಮಂದಿರಗಳ ಮುಖ್ಯಸ್ಥರ ಗೂಡ ಅವರು ಸಂಬಂಧ ಬೆಳಸಿಕೊಂಡಿರುವರು. ಅಲ್ಲದೆ ಬೇರೆ ಬೇರೆ ಧರ್ಮಗಳ ವಿದ್ವಾಂಸರ ಹಾಗು ವೇದಾಂತಿಗಳ ಪರಿಚಯವೂ ಅವರಿಗಾಗಿದೆ. ಆದುದರಿಂದ ಅವರಲ್ಲಿ ಕೆಲವರು ಶೈವರು, ಕೆಲವರು ವೈಷ್ಣವರು, ಕೆಲವರು ಜೈನರು ಎಂದೆನಿಸಿಕೊಳ್ಳುವರು. ಕೆಲವರು ಏಕದೇವಪೂಜಕರಾದರೆ ಹಲವರು ತ್ರಿದೇವ ಪೂಜಕರು. ಇನ್ನೂ ಹಲವರು ದೇವತಾಗಣಗಳನ್ನು ಪೂಜಿಸುತ್ತಿರುವರು. ಹಲವರು ಕ್ರಿಶ್ಚನ್‌ರಾಗಿರುವರು. ಕೆಲವರು ಇಸ್ಲಾಮಧರ್ಮ ಸ್ವೀಕರಿಸಿರುವರು. ಕೆಲವರಿಗೆ ಮೂರ್ತಿಪೂಜೆಯಲ್ಲಿ ವಿಶ್ವಾಸವಿದ್ದರೆ ಹಲವರಿಗೆ ಅದರಲ್ಲಿ ವಿಶ್ವಾಸವಿರಲಿಲ್ಲ. ನಿರೀಶ್ವರ ವಾದಿಗಳೂ ಹಲವರಿದ್ದರು. ಪ್ರಕೃತಿಯೇ ಕೊನೆಯ ತತ್ವವೆಂದು ಕರೆಯುತಿದ್ದರು ಹಲವರು ಆದರೆ ಅವರೆಲ್ಲ ಧಾರ್ಮಿಕ ಭಾವನೆಯವರಾಗಿದ್ದರು. ಆದರೆ ಅವರಲ್ಲಿ ಹಲವರು ಹೆಚ್ಚೆಚ್ಚು ಧಾರ್ಮಿಕ ಭಾವನೆಯವರಾಗುತ್ತ ನಡೆದಂತೆ ಸಾಮಾಜಿಕ ವರ್ತನೆಯಲ್ಲಿ ಕಡಿಮೆ ಧಾರ್ಮಿಕರಾಗಿ ಆಚರಿಸಹತ್ತಿದರು. ಅದರಲ್ಲಿ ಹೆಚ್ಚು ಉತ್ಸಾಹಿಯಾದವನೊಬ್ಬನು ಎಲ್ಲ ಪಂಥ ಪೂಜೆಗಳ ಬಗ್ಗೆ ಮತ್ತು ಜೀವನದ ನಿಜವಾದ ಮಾರ್ಗದ ಬಗ್ಗೆ ಅನೇಕ ಸಲ ಚರ್ಚೆ ನಡೆಸುತ್ತಿದ್ದನು. ಹಲವು ಸಲ ಈ ವಿವಾದದಲ್ಲಿ ವಾಗ್ಯುದ್ಧ ನಡೆದು ತಲೆ ಒಡೆದಾಡುವ ಪ್ರಸಂಗವೂ ಬರುತ್ತಿದ್ದಿತು. ಒಂದೊಂದು ಸಲ ಅದಕ್ಕೂ ಕಠಿನ ಪ್ರಸಂಗಗಳೂ ಬರಹತ್ತಿದವು. ತಮ್ಮ ಧರ್ಮಪಂಥಗಳು ಸತ್ಯ ನಿರ್ದಿಷ್ಟ ಮತ್ತು ಪರಿಪೂರ್ಣ ಪಂಥಗಳೆಂದು ಮನವರಿಕೆಯಾಗುತ್ತ ನಡೆದಂತೆ ಅವರು ಬೇರೆ ಧರ್ಮಪಂಥಗಳ ತಮ್ಮ ಬಾಂಧವರ ಬಗ್ಗೆ ಹೆಚ್ಚೆಚ್ಚು ಅಸಹಿಷ್ಣುಗಳಾಗುತ್ತ ನಡೆದರು. ಮತ್ತು ಪ್ರತಿಯೊಬ್ಬರು ತಮ್ಮ ತಾಯಿಯನ್ನು ತಮ್ಮ ವಿಶಿಷ್ಟ ಪಂಥಕ್ಕೆ ಪರಿವರ್ತಿಸಿಕೊಳ್ಳಲು ಪ್ರಯತ್ನಿಸಹತ್ತಿದರು. ಮತ್ತು ತಮ್ಮ ಮಕ್ಕಳಿಗೂ ಅದೇ ಬಗೆಯ ಪ್ರಯತ್ನ ಮಾಡಲು ಹೇಳಹತ್ತಿದರು. ಆದರೆ ಆ ತಾಯಿಯು ನುಡಿದಳು.

"ಮಗುವೆ, ನಾನು ವೃದ್ಧಳು. ಮತ್ತು ಅಜ್ಞಾನಿಯು. ನನ್ನ ಮಾರ್ಗದಂತೆ ನನಗೆ ನಡೆಯಗೊಡಿರಿ. ನಿಮ್ಮಲ್ಲಿ ಪ್ರತಿಯೊಬ್ಬರು ನಿಮನಿಮಗೆ ಸರಿದೋರಿದಂತೆ ನಡೆಯಿರಿ, ಸದ್ಗುಣಿಗಳಾಗಿರಿ, ಪ್ರಾಮಾಣಿಕರಾಗಿರಿ, ನಿಮ್ಮ ಬಂಧುಗಳನ್ನು ಅವರ ಮಕ್ಕಳನ್ನು ಪ್ರೀತಿಸಿರಿ. ನಿಮ್ಮ ಮತ ತತ್ವಗಳನ್ನು ಮನ್ನಿಸುತಿರುವಂತೆ ಅವರ ಮತ ತತ್ವಗಳಿಗೂ ಮರ್ಯಾದೆ ಕೊಡಿ. ಹೀಗೆ ಮಾಡುತ್ತ ನಡೆದರೆ ನಿಮಗೆಲ್ಲ ಒಳಿತೆ ಆಗುತ್ತ ಹೋಗುವುದು."

ಆದರೆ ದಿನಗಳುರುಳಿದಂತೆ ತಮ್ಮ ಧರ್ಮಗಳ ನುಡಿನಲ್ಲಿ ಅವರು ಪರಸ್ಪರ ಸಂಬಂಧವನ್ನೇ ಮರೆತು ಬಿಟ್ಟರು ಪರಸ್ಪರರು ಅಪರಿಚಿತರು ಮತ್ತು ಶತ್ರುಗಳೆಂಬಂತೆ ಒಬ್ಬರಿಗೊಬ್ಬರು ಕಾಣಹತ್ತಿದರು. ಇದರಿಂದ ಪರಸ್ಪರರಲ್ಲಿ ವೈಷಮ್ಯ ಬೆಳೆಯಹತ್ತಿತು. ಪ್ರತಿಯೊಬ್ಬರು ತಮ್ಮ ಬಾಂಧವರನ್ನು ಧರ್ಮಾಂತರಗೊಳಿಸಲು ಮತ್ತು ಒತ್ತಾಯದಿಂದ ತಮ್ಮ ಧರ್ಮ ಸ್ವೀಕರಿಸಲು ಪ್ರಯತ್ನಿಸಹತ್ತಿದರು.

ಅವರಲ್ಲೊಬ್ಬನು ದುರಂತವನ್ನು ಮಾಡಿ ತಾಯಿಯ ಹತ್ತಿರ ಬಂದು, ಹಲವು ಸತ್ಯದ ಸಲುವಾಗಿ ಅವಳ ಹಲವು ಮಕ್ಕಳನ್ನು ಮತ್ತು ಮೊಮ್ಮಕ್ಕಳನ್ನು ಕೊಂದು ಇಲ್ಲವೆ ನಾಶ ಮಾಡಿದುದನ್ನು ಒಳ್ಳೆ ಹೆಮ್ಮೆಯಿಂದ ಹೇಳಿಕೊಳ್ಳಹತ್ತಿದನು. ರಕ್ತಸಂಬಂಧ ಕೂಡ ಇದರಲ್ಲಿ ಯಾವ ರೀತಿಯಿಂದಲೂ ಪ್ರಯೋಜನ ಬೀಳಲಿಲ್ಲ ಇಂಥ ಧರ್ಮಕೃತ್ಯ ಮಾಡಿದ್ದಕ್ಕಾಗಿ ಅವನು ತಾಯಿಯಿಂದ ಆಶೀರ್ವಾದ ಅಭಿನಂದನೆಗಳನ್ನು ಅಪೇಕ್ಷಿಸಿದ್ದನು. ಆದರೆ ತಾಯಿಯು ತನ್ನ ಪ್ರೀತಿಪಾತ್ರರ ಮರಣಕ್ಕಾಗಿ ಅಳಹತ್ತಿದಳು ಮಾತ್ರ ಮತ್ತು ಅವನ ನಿರ್ದಯ ಅಮಾನುಷ ಕೃತ್ಯಕ್ಕಾಗಿ ಅವನನ್ನು ಒಳಿತಾಗಿ ಬೈದಳು.

ತಮ್ಮ ಕುಟುಂಬಘಾತಕರ ಮೇಲೆ ಇಂಥವೇ ಗಾಯಗಳನ್ನು ಮಾಡಲು ತಾಯಿಯ ಈ ರೋದನ ಮತ್ತು ನಿರ್ಭರ್ತ್ಸನೆಗಳು ಅಪ್ಪಣೆಕೊಟ್ಟವೆಂದು ಅವರು ತಿಳಿದುಕೊಂಡರು. ಆದುದರಿಂದ ಅವರು ತಮ್ಮ ಸರತಿಯೆಂದು ತಾಯಿಯ ಕಡೆಗೆ ಹೋಗಿ ತಮಗಾದ ಅನ್ಯಾಯದ ಪ್ರತೀಕಾರ ಹೀಗೆ ಮಾಡಿದೆವೆಂದು ಒಳ್ಳೆ ಹೆಮ್ಮೆಯಿಂದ ಹೇಳಿಕೊಂಡರು. ಈ ಸುದ್ದಿಯಿಂದ ತಾಯಿ ಸಂತುಷ್ಟಳಾಗುವಳೆಂದು ಅವರು ಭಾವಿಸಿದರು.

ಆದರೆ ತಾಯಿ ಮತ್ತೆ ಕಣ್ಣೀರಿಟ್ಟಳು. ಮತ್ತು ಈ ಮಕ್ಕಳಿಗೂ ಛೀ ಹಾಕಿದಳು. ಏಕೆಂದರೆ ಕೊಲೆಗಡುಕರ ಮತ್ತು ಕೊಲ್ಲಲ್ಪಟ್ಟವರಿಬ್ಬರ ತಾಯಿಯೂ ಅವಳಾಗಿದ್ದರಿಂದ ಯಾರ ಮರಣದಿಂದಲೂ ಅವಳಿಗೆ ಸಂತೋಷವಿರಲಿಲ್ಲ. ಅದರಿಂದ ಅವಳು ಒಳ್ಳೆ ಕಷ್ಟದಲ್ಲಿ ಬಿದ್ದಳು. ಮತ್ತು ಉಪವಾಸ ಪ್ರಾರ್ಥನೆಗಳಿಂದ ಪರಮಾತ್ಮನಿಗೆ ಶರಣುಹೋದಳು. ಮಕ್ಕಳು ಕಸಿದುಕೊಂಡ ಶಾಂತಿಯನ್ನು ಮರಳಿ ಕೊಡಲು ಪರಮಾತ್ಮನನ್ನು ಪ್ರಾರ್ಥಿಸಹತ್ತಿದಳು.

ತಾಯಿಗೆ ಹಾಗೆ ಎನಿಸಿದ್ದರಲ್ಲಿ ಆಶ್ಚರ್ಯವೇನು? ಕೇವಲ ಹಿಂದು ಇಲ್ಲವೆ ಮುಸಲ್ಮಾನ ಅಥವಾ ಕಾಂಗ್ರೆಸ್ಸಿಗನಾಗಿದ್ದರೂ ರಾಷ್ಟ್ರೀಯ ವಿಚಾರದವನಾಗಿದ್ದರೂ ಜಾತೀಯ ದೃಷ್ಟಿಯಿಂದ ವಿಚಾರ ಮಾಡಹತ್ತಿದರೆ ಒಂದು ಜಾತಿಯವರು ಮತ್ತೊಂದು ಜಾತಿಯವರ ಮೇಲೆ ಹೀನ ಅತ್ಯಾಚಾರ ಮಾಡಿದ್ದನ್ನು ನೋಡಿ ಕೇಳಿ ನಿಮ್ಮಲ್ಲಿ ಕ್ಷೇಷ ಇಲ್ಲವೆ ಸಮಾಧಾನಭಾವನೆಯಾಗಬಹುದು. ಆದರೆ ನಿಮ್ಮ ಅನ್ಯೋನ್ಯ ಕೋಪ ಮತ್ತು ಸಂತೋಷವನ್ನು ಹಾಗು ನಿಮ್ಮ ಜಾತೀಯ ಘೋಷಣೆಗಳನ್ನು ನೋಡಿ ನಿಮ್ಮೆಲ್ಲರ ತಾಯಿಗೆ ಏನು ಅನಿಸುವದೆಂಬದನ್ನು ಕ್ಷಣಹೊತ್ತು ವಿಚಾರಿಸಿರಿ. ಅವಳ ಕಣ್ಣುಗಳತ್ತ ನೋಡಿರಿ, ಅವಳು ಕಣ್ಣೀರಿಡುವದು ಮತ್ತು ಅತ್ಯಂತ ಕಷ್ಟದಲ್ಲಿ ಬಿದ್ದುದು ನಿಮಗೆ ಕಂಡುಬರುವದು.

ಎಲ್ಲರ ಈ ತಾಯಿಯ ಬಗ್ಗೆ ವಿಚಾರಮಾಡಲು ನೀವು ಸಮರ್ಥರಾಗದಿದ್ದರೆ ಗಾಂಧೀಜಿಯ ಕಣ್ಣು ಮತ್ತು ಹೃದಯದತ್ತ ನೋಡಿರಿ. ನಿಮಗೆ ಆ ತಾಯಿಯ ದುಃಸ್ಥಿತಿ ಕಂಡುಬರದಿರದು.

ವಾಪಿ — ಕಿಶೋರಲಾಲ
೨೪—೧೧—೪೬ — ಮಶ್ರುವಾಲಾ

# ನಾರದ ಪತ್ರ

(ಆನೇ ಪುಟದಿಂದ ಮುಂದರಿದುದು)

ಮಾತಾಡುತ್ತ, ಮುನ್ನಾದಿನ ಗೊಫ್ರಾನ ಸಾಹೇಬರ ಮಾತುಗಳಿಗೆ ಆಗಿಂದಾಗ ಅಲ್ಲೇ ಉತ್ತರ ಹೇಳಲು ಬಯಸಿದವನಿಗೆ ಅವಕಾಶ ಕೊಡದ್ದರಿಂದ ಹಿಂದುಗಳು ನೊಂದುಕೊಂಡು ಸಭೆಗೆ ಬಹಿಷ್ಕಾರ ಹಾಕಿದ್ದಾರೆಂಬ ಸುದ್ದಿ ತಮಗೆ ಬಂದಿರುವದಾಗಿ ಗಾಂಧೀಜಿ ಹೇಳಿದರು. "ನನಗೆ ಪಶ್ಚಾತ್ತಾಪವಾಗಿಲ್ಲ. ಎರಡನೆಯವರನ್ನು ಸಂತೋಷಗೊಳಿಸುವದಕ್ಕಾಗಿಯೆ ನಾನು ಎಂದೂ ಏನಾದರೂ ನುಡಿದವನಲ್ಲ. ಇತರರ ಮೇಲೆ ಅದರ ಪ್ರತಿಕ್ರಿಯೆಯೇನೆ ಆಗಲಿ ನಾವು ನಮ್ಮ ಕರ್ತವ್ಯವನ್ನು ಮಾಡಲೇಬೇಕೆಂದು ನಾನೆಂದಿನಿಂದಲೂ ಉಪದೇಶಿಸಿದ್ದೇನೆ. ತನಗೆ ಸರಿಯೆಂದು ತೋರಿದ್ದನ್ನು ಯಾವಾಗಲೂ ಮಾಡುವವನು ಯಾರಿಗೂ ಹೆದರುವದಿಲ್ಲ."

ಮುಂದೆ ಸ್ಥಳಿಕ ಪರಿಹಾರ ಸಂಸ್ಥೆಯ ಕಾರ್ಯದರ್ಶಿ ಬಂದು, ತಾವು ಸಭೆಯನ್ನು ಬಹಿಷ್ಕರಿಸಿದ್ದಿಲ್ಲವೆಂದೂ ಆ ದಿನ ರವಿವಾರ ಸಂತೆಯ ದಿನವಾಗಿದ್ದುದರಿಂದ ಬಹಳ ಮುಸ್ಲಿಮರೂ ಅವರಲ್ಲಿ ಅನೇಕ ಪುಂಡರೂ ಬಂದು ಕೂಡಬಹುದೆಂಬ ಭಯದಿಂದ ಹೆಂಗಸರು ಹೊರ ಬರಲು ಒಪ್ಪಲಿಲ್ಲವೆಂದೂ ತಿಳಿಸಿದನು.

೧೯ ನೆ ತಾರೀಕು ಸಂಜೆ ಮಾಧುಪುರದಲ್ಲಿ ಪ್ರಾರ್ಥನಾ ಸಭೆಯಲ್ಲಿ ಮಾತಾಡುತ್ತ ಗಾಂಧೀಜಿ ಹೇಳಿದ್ದು: "ಪರಿಹಾರ ಸಂಸ್ಥೆಯ ಕಾರ್ಯದರ್ಶಿ ಕೊಟ್ಟ ವಿವರಣೆ ಬರಿ ಟೊಳ್ಳು ನವವೆಂದು ನನಗೆ ಒಬ್ಬ ಗೆಳೆಯನಿಂದ ತಿಳಿದುಬಂದಿದೆ. ಅವರು ಸಭೆಯನ್ನು ಬಹಿಷ್ಕರಿಸಿದರೆ ನನಗೇನೂ ಕೆಡಕೆನಿಸುವದಿಲ್ಲ. ಆ ಬಗ್ಗೆ ನನ್ನೊಡನೆ ಕ್ಷಮಾಯಾಚನೆ ಕೇಳುವದು ವಿಹಿತವಾಗಿತ್ತು. ಆದರೆ ಭಯದಿಂದಲೇ ಹೊರಗೆ ಬಾರದಿದುದು ನಿಜವಾಗಿದ್ದರೆ ಅವರು ಕ್ಷಮಾಯಾಚನೆ ಮಾಡುವದೇ ಅವಶ್ಯವಿಲ್ಲ. ಆದರೆ ಹಾಗೆ ಹೆದರಲು ಅವರಿಗೆ ನಾಚಿಕೆಬರಬೇಕು. ಅಲ್ಲದೆ ಗಂಡಸರು ಕೂಡ ಹೆದರಿ ಹೊರಬಾರದಿರುವದನ್ನು ಹೇಡಿಗಳಾಗಿ ಹೋದರೆ? ಮುಸ್ಲಿಮರು ಅವರನ್ನೇನು ನುಂಗಿ ಬಿಡುತ್ತಿದ್ದರೆ? ಅವರು ಅಂಥ ಹೇಡಿಗಳಾಗಿದ್ದರೆ ಈ ದೇಶದಲ್ಲಿ ಉಳಿಯಲು ಯೋಗ್ಯರಲ್ಲ. ಇಂದು ಮುಂಜಾನೆ ನನ್ನಲ್ಲಿ ಬಂದು ಮಾಧುಪುರದಲ್ಲಿ ಒಂದು ಮಹಿಳ ಸಭೆಯನ್ನು ಜರುಗಿಸಬೇಕೆಂದು ಒಬ್ಬ ತಂಗಿ ಕೇಳಿಕೊಂಡಳು. ಅವಳು ಮೂರು ಪ್ರಶ್ನೆಗಳನ್ನು ನನ್ನ ಮುಂದೆ ಇರಿಸಿದಳು. ಮೊದಲನೆ ಪ್ರಶ್ನೆಯೆಂದರೆ, ಎಷ್ಟು ಪ್ರಯತ್ನ ಮಾಡಿದರೂ ಕೆಲವು ಅಪಹೃತ ಸ್ತ್ರೀಯರನ್ನು ಮರಳಿ ಪಡೆಯುವದು ತಮಗೆ ಸಾಧ್ಯವಾಗಿಲ್ಲ. ಆ ಬಗ್ಗೆ ನನಗೆ ಪತ್ರ ಬರೆಯಬೇಕೆಂದೂ ಅದನ್ನು ನಾನು ಸಹೀದ ಸುಹ್ರವರ್ದಿಯವರಿಗೆ ಕಳಿಸುವೆನೆಂದೂ ಹೇಳಿದೆ. ಮುಖ್ಯ ಮಂತ್ರಿಗೆ ಈಗೇ ನೇರವಾಗಿ ಬರೆಯಲೂಬಹುದು. ಇದು ವಿಲಂಬ ಮಾಡುವ ವಿಷಯವಲ್ಲ. ಎರಡನೆಯದಾಗಿ ಹಳ್ಳಿಗಳಲ್ಲಿ ಕೆಲ ಸ್ತ್ರೀಯರು ಹೊರಟು ಬರಲು ಇಚ್ಛಿಸುವರೆಂದೂ ಆದರೆ ಸೈನಿಕ ಕಾವಲನ್ನು ಅವರು ಅಪೇಕ್ಷಿಸುತ್ತಾರೆಂದೂ ಅವಳು ಹೇಳಿದಳು. ನಾನೆಂದೂ ಇದರಲ್ಲಿ ಪಾಲುಗಾರನಾಗಲಾರೆನೆಂದೆ. ನನಗಂತೂ ಪೋಲೀಸ ಮತ್ತು ಸೈನಿಕ ರಕ್ಷಣೆಯ ಮೋಹವಿಲ್ಲೆಂದೂ ಬೇಕಾದಾಗ ಅವರನ್ನು ಹಿಂತೆಗೆದುಕೊಳ್ಳಬಹುದೆಂದೂ ಮುಖ್ಯಮಂತ್ರಿಗಳಿಗೆ ಹೇಳಿಬಿಟ್ಟಿದ್ದೇನೆ. ಅವರ ಇಚ್ಛೆ ಹಾಗಿದ್ದರೆ, ಹಿಂದೂ ಮುಸ್ಲಿಮರು ಪರಸ್ಪರರ ತಲೆಗಳನ್ನು ಒಡೆಯಲು ಸ್ವತಂತ್ರರಿರಬೇಕು. ನಾನು ಅದನ್ನು ಸಹಿಸಬಲ್ಲೆ ಆದರೆ ರಕ್ಷಣೆಗಾಗಿ ಸೈನ್ಯ ಮತ್ತು ಪೋಲೀಸರನ್ನು ಅಪೇಕ್ಷಿಸಿದರೆ ನಾವು ಕೊನೆಯ ವರೆಗೂ ಗುಲಾಮರಾಗಿಯೆ ಉಳಿಯುವೆವು. ಸ್ವಾತಂತ್ರ್ಯಕ್ಕೆ ತ ಸುರಕ್ಷಿತತೆ ಮೇಲಿಂದು ಬಗೆಯುವರಿಗೆ ಬಿಡುವ ಹಕ್ಕಿಲ್ಲ. ಸ್ತ್ರೀಯರು ಸ್ವತಂತ್ರರಾಗಬೇಕೆಂದು ನನ್ನ ಬಯಕೆ. ಬಲುಮೆಗೆ ಹೆದರಿ ಧರ್ಮಾಂತರಗೊಳ್ಳುವದು ಧರ್ಮಾಂತರವಲ್ಲ. ಬರಿ ಹೇಡಿತನ. ಹೇಡಿ ನರನಾರಿಯರು ಯಾವದೇ ಧರ್ಮಕ್ಕೆ ಹೊರೆಯಾಗುವರು. ಇಂದು ಮುಸ್ಲಿಮರಾದರು, ನಾಳೆ ಕ್ರಿಶ್ಚಿಯನ್ನರಾದರು ನಾಡಿದ್ದು ಇನ್ನೊಂದು ಧರ್ಮವನ್ನು ಸ್ವೀಕರಿಸಬಹುದು. ಇದು ಪವಿತ್ರ ಪಜೀದಿಗಳಿಗೆ ಭೂಷಣವಲ್ಲ. ಪುರುಷ ಕಾರ್ಯಕರ್ತರು ತಾವೇ ಸ್ವಂತವಾಗಿ ಕರೆತರಲು ಹೋಗುವದಾಗಿಯೂ ತಮ್ಮ ಜೀವಕೆತ್ತಾದರೂ ಅವರನ್ನು ಕಾಯುವದಾಗಿಯೂ ಸ್ತ್ರೀಯರಿಗೆ ಮಾತುಕೊಡುವದು ಸರಿಯಾದ ದಾರಿ ಆದರೂ ಆ ಹೆಂಗಸರು ಬರಲು ಹೆದರಿದರೆ ಅವರಿಗೆ ಕೆಡುಕಾಗುವದೇ ಸಾಧ್ಯವಿಲ್ಲ. ಈಗ ಬಂದೊದಗಿದ ಮಹಾವಿಪತ್ತಿಯನ್ನು ಉಪಯೋಗಿಸಿಕೊಂಡು ಅವರು ತಮ್ಮ ಭಯದ ಭೂತವನ್ನು ಉಚ್ಚಾಟನೆ ಮಾಡಬೇಕು, ಕೊನೆಯದಾಗಿ, ನಿರಾಶ್ರಿತರನ್ನು ತಮ್ಮ ಮನೆಗಳಿಗೆ ತಿರುಗಿ ಹೋಗಲು ಹೇಗೆ ಹೇಳೋಣವೆಂದು ಆ ತಂಗಿ ಕೇಳಿದಳು. ಪೋಲೀಸ ಅಥವಾ ಸೈನಿಕರ ರಕ್ಷಣೆಯಲ್ಲಿ ಮರಳಿ ಹೋಗಲು ನಾನು ಹೇಳಲಾರೆನೆಂದು ಅವಳಿಗೆ ಹೇಳಿದೆ. ಮುಸ್ಲಿಮರ ಭಯದಿಂದ ಅವರು ಓಡಿ ಬಂದಿದ್ದಾರೆ. ಆದುದರಿಂದ ಮುಸ್ಲಿಮರೇ ಮುಂದೆ ಬಂದು, ಅವರನ್ನು ತಮ್ಮ ಸ್ವಂತ ತಾಯಿ ತಂಗಿಯರಂತೆ ಕಂಡು ತಮ್ಮ ಸ್ವಂತ ಪ್ರಾಣಗಳಿಂದ ಅವರನ್ನು ರಕ್ಷಿಸುವದಾಗಿ ಭಾಷೆಕೊಡುವದು ಅವಶ್ಯ. ಪ್ರತಿಯೊಬ್ಬ ನಿಗೂ ತನಗೊಪ್ಪಿಗೆಯಾದ ಧರ್ಮವನ್ನು ಯಾರ ಆತಂಕವೂ ಇಲ್ಲದೆ ಅನುಸರಿಸುವ ಹಕ್ಕು ಇದೆ. ಎಲ್ಲರೂ ಒಬ್ಬನೇ ದೇವರನ್ನು ಆರಾಧಿಸುತ್ತಾರೆ. ಆದರೆ ವಿವಿಧ ನಾಮಗಳಿಂದ. ಈ ಗಿಡದಲ್ಲಿಯೇ ನಾನು ನನ್ನ ದೇವರನ್ನು ಕಂಡು ಆರಾಧಿಸಿದರೆ ಮುಸ್ಲಿಮರೇಕೆ ಆಕ್ಷೇಪಿಸಬೇಕು? ತನ್ನ ದೇವರು ಅನ್ಯರ ದೇವರಿಗಿಂತ ಮೇಲೆಂದು ಹೇಳುವದು ತಪ್ಪು. ದೇವರು ಎಲ್ಲರಿಗೂ ಒಬ್ಬನೆ. ಆದುದರಿಂದಲೇ ಪ್ರತಿಹಳ್ಳಿಯಲ್ಲಿ ಒಬ್ಬ ಸಜ್ಜನ ಹಿಂದು ಮತ್ತು ಒಬ್ಬ ಸಜ್ಜನ ಮುಸ್ಲಿಂ ಇವರುಸೇರಿ ಹಳ್ಳಿಯ ಶಾಂತಿಗೆ ಹೊಣೆ ನಿಲ್ಲಬೇಕೆಂದು ನನ್ನ ಸೂತ್ರ. ಆಗ ಮಾತ್ರ ನಾನು ನಿರಾಶ್ರಿತರಿಗೆ ಮರಳಲು ಕೇಳಿಕೊಳ್ಳಬಲ್ಲೆ. ನನ್ನ ಸೂಚನೆಯನ್ನು ಮಂತ್ರಿಗಳೂ ಒಪ್ಪಿಕೊಂಡಿದ್ದಾರೆ.

ಕಾಝಿರಖಿಲ,
೨೪-೧೧-೪೬ —ಪ್ಯಾರೇಲಾಲ

## ಹಳ್ಳಿಗಳಲ್ಲಿ ಮಹಾತ್ಮರು

ಸ್ನೇಹಿತ ಸೇವಾ ಸಂಘದ ಇಬ್ಬರು ಅಮೇರಿಕನ ಸದಸ್ಯರು ೪ ಕ್ಕೆ ಸಾಯಂಪ್ರಾರ್ಥನೆಯ ಪೂರ್ವದಲ್ಲಿ ಮಹಾತ್ಮರನ್ನು ಭೆಟ್ಟಿಯಾಗಿ ಪ್ರಾರ್ಥನೆಗೂ ಉಳಿದಿದ್ದರು. ಅವರಲ್ಲೊಬ್ಬರಾದ ಪ್ರೊ. ಸ್ಟುವರ್ಟ ನೆಲ್ಸನರು ಐಜಾಕ ವಾಟ್ಸನ್ನ 'ನಮ್ಮ ದೇವ್ ಯುಗಯುಗಗಳ ರಕ್ಷಕ' ಎಂಬ ಅಂಗ್ಲ ಗೀತೆಯನ್ನು ಹಾಡಿದರು.

ಮಹಾತ್ಮರು ಜನರನ್ನುದ್ದೇಶಿಸಿ ಹೀಗೆಂದರು—ಪ್ರೊ. ನೆಲ್ಸನರು ಪ್ರಾರ್ಥನೆಯಲ್ಲಿ ಭಾಗವಹಿಸಿದ್ದರಿಂದ ನನಗೆ ಸಂತೋಷವಾಗಿದೆ. ಆಗಾಖಾನ ಅರಮನೆಯಲ್ಲಿ 'ನಾವು ಸ್ಥಾನಬದ್ಧರಾಗಿದ್ದಾಗ ಮೀರಾಬೆನರು ಈ ಆಂಗ್ಲ ಗೀತವನ್ನು ಇಂಪಾಗಿ ಹಾಡಿ ತೋರಿಸುತ್ತಿದ್ದರು. ಗಜೇಂದ್ರಮೋಕ್ಷ ಮತ್ತು ಈ ಗೀತದಲ್ಲಿ ಹೋಲಿಕೆ ಬಹಳವಾಗಿದೆ. ಲೌಕಿಕದ ನೆರವಿನ ಆಸೆ ತೀರಿದಮೇಲೆ ದೇವರನ್ನು ನಂಬುವ ಭಾವ ಈ ಎರಡೂ ಭಜನೆಗಳಲ್ಲಿದೆ. ಮಾನವಬಲವೆಲ್ಲ ಕ್ಷಣಿಕ. ದೇವರಲ್ಲಿ ಶ್ರದ್ಧೆಯಿಟ್ಟರೆ ನಿಜವಾದ ಸುರಕ್ಷಿತತೆ ಇದೆ.

'ನಿನ್ನ ಬೆನ್ನಿಗೆ ದೆಯೊಸರಿರಾ
ಕಿದರು ಸಂಕರು ಕೌಟ್ಯದಿ
ನಿನ್ನ ಭುಜಬಲದಾಶ್ರಯುಬೆನು
ಗಿಹುದು ರಕ್ಷಣೆ ನಕ್ಕಿ.'

ನೌಖಾಲಿಯಲ್ಲಿಯ ಪ್ರತಿಯೊಬ್ಬರೂ ಈ ಪಾಠವನ್ನು ಕಲಿಯುವದಗತ್ಯವಾಗಿದೆಂದರು ಮಹಾತ್ಮರು.

ಮಹಾತ್ಮರು ಹಳ್ಳಿಗಳಿಗೆ ಪಾದಚಾರಿಯಾಗಿ ಹೋಗುವ ತಮ್ಮ ಕಾರ್ಯಕ್ರಮವನ್ನು ಬೇಗನೆ ಪ್ರಾರಂಭಿಸುವವರಿದ್ದಾರೆ. ಈ ಸಂಚಾರದಲ್ಲಿ ಅವರು ತಮ್ಮೊಡನೆ ಅವಶ್ಯ ಕನಿಷ್ಠ ವಸ್ತುಗಳನ್ನು ಕೊಂಡೊಯ್ಯತಕ್ಕವರಿದ್ದಾರೆ.

ಮಹಾತ್ಮರ ಶಿಬಿರದ ಕಾವಲಿಗಿದ್ದ ಪೋಲೀಸರ ಸಂಖ್ಯೆ ಹೆಚ್ಚಿದೆ. ಮಹಾತ್ಮರು ಕಲಕತ್ತೆಯಿಂದ ಬರುವಾಗ ನಾಲ್ವರು ಸಶಸ್ತ್ರ ಪೋಲೀಸರೂ ಒಬ್ಬ ಫೌಜದಾರರೂ ಅವರೊಡನೆ ಬಂದಿದ್ದರು. ಆದರೆ ಇದು ನೌಖಾಲಿಯಿಂದ ಮತ್ತೆ ೧೬ ಜನ ಸಶಸ್ತ್ರ ಪೋಲೀಸರು ಆಗಮಿಸಿದ್ದಾರೆ. ಪೋಲೀಸರು ಮಹಾತ್ಮರ ಮನೆಯ ಸಮೀಪದ ಮನೆಯಲ್ಲಿದ್ದಾರೆ.

# ಸಾರ್ವಜನಿಕರಿಗೆ ಮುಕ್ತದ್ವಾರವಿರಲಿ

ವಾಯಿಸರಾಯರಿಗೆ ದಿಲ್ಲಿಯಿಂದ ಇಲ್ಲಿನ ಸಿಮುಲೆಯಿಂದ ತಂತಿಗಳನ್ನು ಕಳಿಸಬೇಕಾಗಿದ್ದರೆ ಮುಕ್ತದ್ವಾರ ಎಂದು ವಿಧಿಸಲಾಗುವದು. ವಾಯಿಸರಾಯರಿಗೆ ಪ್ರಥಮ ಪ್ರಾಶಸ್ತ್ಯ ಕೊಡಲಾಗುವದೆಂಬ ಕರಾರಿನಿಂದಲೆ ತಂತಿಖಾತೆಯ ಉಪಯೋಗವನ್ನು ಸಾರ್ವಜನಿಕರು ಮಾಡಬಲ್ಲರು. ವಾಯಿಸರಾಯರು ಉಗಿಬಂಡೆಗಳಲ್ಲಿ ಸಂಚರಿಸತಿದ್ದಾಗ ಅವರ ಗಾಡಿಗೆ ವಿಲಂಬವಾಗದಂತೆ ಉಳಿದ ಗಾಡಿಗಳ ಓಡಾಟವನ್ನೇ ನಿಲ್ಲಿಸಲಾಗುತಿತ್ತು.

ಯುದ್ಧಕಾಲದಲ್ಲ ಸಾರ್ವಜನಿಕರ ಹಿತವನ್ನನು ಲಕ್ಷಿಸದೆ ಸೈನಿಕರ ಬೇಕು ಬೇಡಿಕೆಗಳಿಗೆ ಪ್ರಥಮ ಪ್ರಾಶಸ್ತ್ಯ ಕೊಡಲಾಗುತಿದ್ದಿತು. ಯುದ್ಧ ನಡೆದಿರುವಾಗ ಇದಕ್ಕೆ ಯಾರು ಅಕ್ಷೇಪವೆತ್ತಬೇಕು?

ಬೇರೆ ಬೇರೆ ಇಂದ್ರಿಯಗಳು ಮತ್ತು ಪ್ರಾಣವಾಯುಗಳಲ್ಲಿ ಯಾರು ಶ್ರೇಷ್ಠ ಎಂಬ ಬಗ್ಗೆ ಎದ್ದ ವಿವಾದದ ಸಂಬಂಧದಲ್ಲಿ ಉಪನಿಷತ್ತಿನಲ್ಲಿ ಕತೆಯುಂಟು. ಕಣ್ಣು ಒಂದು ವರ್ಷ ಕೆಲಸಬಿಟ್ಟವು. ಕುರುಡಮನುಷ್ಯ ಹೇಗೋ ಕೆಲಸ ಸಾಗಿಸಿದನು. ಕಿವಿಗಳು ಸಂಪು ಹೂಡಿದವು. ಕಿವುಡನೂ ಸಂಸಾರ ಸಾಗಿಸಿದನು. ಮೂಗು ನಾಲಿಗೆ ಮತ್ತು ಉಳಿದ ಇಂದ್ರಿಯಗಳೂ ಸರತಿಯಂತೆ ಕೆಲಸನಿಲ್ಲಿಸಿದವು. ಪ್ರಾಣವಾಯುವು ಅವುಗಳ ಸಹಾಯವಿಲ್ಲದೆ ಹಾಗೆಯೆ ಕಾರ್ಯ ಮಾಡುತ್ತಿತು. ಕೊನೆಗೆ ಪ್ರಾಣವಾಯುವೇ ಸಂಪು ಹೂಡಲು ಹೆದರಿಸಿತು ಅಗ ಎಲ್ಲೆಡೆ ಅಲ್ಲೋಲ ಕಲ್ಲೋಲವುಂಟಾಯಿತು. "ನೀನು ನಮ್ಮೆಲ್ಲರಿಗಿಂತ ಶ್ರೇಷ್ಠನಿರುವಿ, ನೀನು ಹೊರಟೆದ್ದು ಹೋಗಬೇಡ. ನೀನಿಲ್ಲದೆ ನಾವೆಲ್ಲ ಬದುಕಲಾರೆವು" ಒಂದೇ ದನಿಯಿಂದ ಎಲ್ಲವೂ ಕೂಗಿದವು.

ಶತಮಾನಗಳಿಂದ ಹಿಂದುಸ್ತಾನದಲ್ಲಿ ಸರಕಾರ ಮತ್ತು ಸಮಾಜ ರಾಷ್ಟ್ರದ ಅತ್ಮರಂತಿದ್ದ ಜನಸಾಮಾನ್ಯರನ್ನು ಅಲಕ್ಷಿಸಿದ್ದಾರೆ. ಇದು ಅತ್ಮಘಾತಕ ಧೋರಣ. ಒಕ್ಕಲಿಗರು ಕೂಲಿಕಾರರು ಮತ್ತು ಕೈಗಾರಿಕೆ ಕೆಲಸಗಾರರಿಗೆ ತಿನ್ನಲಿಕ್ಕೆ ಸಾಕಷ್ಟು ಸಿಕ್ಕುವುದಿಲ್ಲ ನಮ್ಮ ಮನೆಯಲ್ಲಿ ಹೆಣ್ಣುಮಕ್ಕಳನ್ನು ಬಿಟ್ಟುಗೊಟ್ಟು ಉಳಿದವರೆಲ್ಲ ಅತ್ಯುಕ್ತಮ ಜೀವನವನ್ನು ಸಾಗಿಸುತ್ತಾರೆ. ದೇಶದಲ್ಲಿ ಮೂಲನಿವಾಸಿಗಳಾದ ಆದಿವಾಸಿಗಳನ್ನು ಬಿಟ್ಟುಗೊಟ್ಟು ಉಳಿದವರಿಗೆಲ್ಲ ಸ್ಥಳವಿದೆ ಅವರೆಲ್ಲರನ್ನು ಗುಡ್ಡಗಳಿಗೆ ಓಡಿಸಲಾಗಿದೆ. ಅವರಲ್ಲಿ ಅನೇಕ ಜನಾಂಗಗಳ ಅಸ್ತಿತ್ವವೇ ನಾಶವಾಗಿದೆ. ಭೂಮಿಯ ಭಾರವನ್ನೆಲ್ಲ ತನ್ನ ಹೆಗಲ ಮೇಲೆ ಹೊರುತಿರುವ ಒಕ್ಕಲಿಗನನ್ನು ಕೆಳಕ್ಕೆ ನೂಕಲಾಗಿದೆ. ಗೌರವಾರ್ಹವೆಂದು ಕರೆಯಿಸಿಕೊಳ್ಳುತಿರುವ ಅರಸ ಮತ್ತು ಅವನ ಅಧಿಕಾರಿಗಳು, ನಾಗರಿಕರು ಮತ್ತು ಸಾರ್ವಜನಿಕ ಧುರೀಣರು, ಡಾಕ್ಟರರು, ವಕೀಲರು ಮತ್ತು ಎಂಜಿನಿಯರರು ಇವರೆಲ್ಲ ಒಕ್ಕಲಿಗರನ್ನು ಮತ್ತು ಕೂಲಿಕಾರರನ್ನು ಶೋಷಿಸಿ ಜೀವಿಸುತಿರುವರು. ಕರಭಾರವು, ಅದರ ಸ್ವರೂಪ ಎಂತಹದೇ ಇರಲಿ ಕೊನೆಗೆ ಅವರ ಮೇಲೆಯೇ ಬೀಳುವದು. ಆದರೆ ಬಹಳ ದಿನಗಳ ವರೆಗೆ ಈ ಸುಲಿಗೆ ನಡೆಯಲಾರದು. ಜೀವನದ ಮುಖ್ಯ ಅವಶ್ಯಕತೆಗಳನ್ನು ಪೂರಯಿಸುತಿರುವ ಮತ್ತು ಜನಸಾಮಾನ್ಯರು ಸ್ವಲ್ಪೇ ಬಂಡವಲು ಮತ್ತು ಅಲ್ಪ ಬುದ್ಧಿಶಕ್ತಿಯಿಂದ ಕೈಕೊಳ್ಳಬಹುದಾದ ಉದ್ಯೋಗ ಧಂದೆಗಳನ್ನು ಬಿಟ್ಟುಗೊಟ್ಟು ಉಳಿದ ಧಂದೆಗಳನ್ನು ನೀವು ಕೈಕೊಳ್ಳಿರೆಂದು ಗಾಂಧೀಜಿ ಹಿಂದುಸ್ತಾನದಲ್ಲಿಯ ಉದ್ದಿಮೆದಾರರಿಗೆ ಹೇಳಿರುವರು. ಬಂಡವಲುದಾರರು ಇದರಲ್ಲಿ ದೊಡ್ಡ ಔದಾರ್ಯ ತೋರಿಸಿದಂತಾಗುವದಿಲ್ಲ. ಯಾರಿಂದ ಅಧಿಕಾರಗಳೆಲ್ಲಹೊರಹೊಮ್ಮುವವೊ ಅಂಥವರಿಗೆ ಮಾರ್ಗವನ್ನು ಮುಕ್ತಮಾಡಿಕೊಡುವ ವಿಷಯವಿದು. ಇಂದು ಜನಸಾಮಾನ್ಯರಿಗೆ ತಮ್ಮ ಹಕ್ಕು ಬಾಧ್ಯತೆ, ಹಿತಸಂಬಂಧಗಳ ಅರಿವಿಲ್ಲ. ಜಿಗಳೆಯಂತೆ ತನ್ನ ರಕ್ತವನ್ನು ಹೀರುವವರಾರೆಂಬುದು ಅವರಿಗೆ ಗೊತ್ತಿಲ್ಲ. ತಮ್ಮ ಶಕ್ತಿಯ ಅರಿವೂ ಅವರಿಗಿಲ್ಲ—ಅಂತೆಯೆ ಅವರಿಂದು ನಿಜವಾದ ಒಡೆಯರಾಗುಳಿಯದೆ ಭಿಕ್ಷುಕರಂತಿರುವರು. ಆದುದರಿಂದ ಗಾಂಧೀಜಿ ಅವರ ನಿರ್ವೇತನ ಕಾಯದೆ ಸಲಹೆಗಾರರಿರುವರು. ಖಾದಿ ಮತ್ತು ಗ್ರಾಮೋದ್ಯೋಗಗಳ ಯೋಜನೆಯನ್ನು ಎಲ್ಲೆಲ್ಲಿ ಜನಸಾಮಾನ್ಯರು ಕೈಕೊಳ್ಳಬಹುದೊ ಅಲ್ಲಲ್ಲಿ ಅವರಿಗೆ ಮುಕ್ತದ್ವಾರವಿರಬೇಕೆಂದು ಗಾಂಧೀಜಿ ಈಗಾಗಲೆ ಬಂಡವಲದಾರರಿಗೆ ನೋಟೀಸ ಕೊಟ್ಟಿರುವರು. ಬಡವರ ಉದ್ಯೋಗಗಳನ್ನು ಕಸಿದುಕೊಳ್ಳುವ ಗಿರಣಿಗಳನ್ನು ಸ್ಥಾಪಿಸಬೇಡಿರಿ, ಖಾದಿ ಹುಟ್ಟುವ ಸ್ಥಳಗಳಿಗೆಲ್ಲ ಗಿರಣಿ-ಬಟ್ಟೆಯನ್ನು ಕಳಿಸಬೇಡಿರಿ. ನೀವು ರೇಲ್ವೆಹಳಿಗಳನ್ನು ತಯಾರಮಾಡಬಹುದು, ಗ್ರಾಮೋಫೋನ ರೇಡಿಯೋ, ಎಂಜಿನುಗಳು ಮೋಟಾರು ಕಾರುಗಳು ಮತ್ತು ವಿಮಾನಗಳನ್ನು ಸಿದ್ಧಮಾಡಬಹುದು. ಆದರೆ ಒಕ್ಕಲತನ, ಡೇರಿಫಾರ್ಮಿಂಗ, ಬಟ್ಟೆ ತಯಾರಿಸುವದು ಮತ್ತು ಉಳಿದ ಗ್ರಾಮೋದ್ಯೋಗಗಳನ್ನು ಹಳ್ಳಿಗರಿಗಾಗಿ ಬಿಟ್ಟುಗೊಡಿರಿ. ತಾಂತ್ರಿಕ ಮತ್ತು ಸಂಘಟನಾಕೌಶಲ್ಯದ ನಿಮ್ಮ ಜ್ಞಾನದ ಸಹಾಯವನ್ನು ಅವರಿಗೆ ಸಲ್ಲಿಸಿರಿ. ಆದರೆ ಅವರನ್ನು ಸುತ್ತಲಿನ ನೈಜವಾದ ಉದ್ಯೋಗಗಳಿಂದ ಹೊರದೂಡಬೇಡಿರಿ. ಅವರಿಗೆ ಜೀವನವೇ ಶಿಕ್ಷಣ ಜೀವನ ಉದ್ಯೋಗವನ್ನವಲಂಬಿಸಿದೆ. ಒಕ್ಕಲತನ, ಬಟ್ಟೆ ನೇಯುವದು ಮತ್ತು ಉಳಿದ ಗ್ರಾಮೋದ್ಯೋಗಗಳು ಡೇರಿ ಫಾರ್ಮಿಂಗ ಜೇನು ಸಾಕುವದು ಮೊದಲಾದ ಉದ್ಯೋಗಗಳು ಹಳ್ಳಿಗರ ಬುದ್ಧಿಶಕ್ತಿಯ ಬೆಳವಣಿಗೆಗೆ ಅತ್ಯಾವಶ್ಯಕವಾದವುಗಳು. ಹಳ್ಳಿಗಳಿಗೆ ಶಿಕ್ಷಣ ದಾಯಕವಾದವುಗಳನ್ನು ತೆಗೆದುಕೊಳ್ಳಬೇಡಿರಿ. ನಯೀ ತಾಲೀಮು ಜೀವನದಾಯಿಯಾಗಿದೆ. ಅದು ವಿಧಾಯಕ ಹಾಗು ಉತ್ಪಾದಕವಾಗಿದೆ. ಅದರಿಂದ ಬುದ್ಧಿಶಕ್ತಿಯ ಅಭಿವೃದ್ಧಿಯಾಗಿ ಕೈಗೆ ಶಿಕ್ಷಣ ದೊರೆತು ಬೆರಳುಗಳ ಕೌಶಲ್ಯ ಬೆಳವಣಿಗೆಯಾಗುತ್ತದೆ. ಇಡೀ ದೇಶದಲ್ಲೆಲ್ಲ ಇದು ಪ್ರಸಾರವಾಗಬೇಕು. ನಯೀ ತಾಲೀಮಿಗೆ ಈ ರೀತಿ ಮುಕ್ತದ್ವಾರಕೊಟ್ಟಬಳಿಕ, ಶಿಕ್ಷಣ ಉದ್ಯೋಗಗಳ ಉಳಿದ ಸ್ವರೂಪಗಳಿಗೆ ಉಚಿತಸ್ಥಾನವಿದೆ.

"ನಿಮ್ಮಲ್ಲಿ ಹಣ ಮತ್ತು ಅಧಿಕಾರವಿದೆ. ಆದರೆ ಹಳ್ಳಿಗರಿಗೆ ಜನಬಲವಿದೆ. ಪರಿಶ್ರಮವೆ ಅವರ ಬಂಡವಲು. ತಮ್ಮ ಬಂಡವಲಿನ ಅರಿವು ಅವರಿಗಾದ ಕೂಡಲೆ ಅವರು ಜೀವನದ ಮೇಲೆ ಪ್ರಭುತ್ವ ನಡೆಸುವರು. ಅವರೊಡನೆ ವೈರ ಕಟ್ಟಿಕೊಳ್ಳುವದು ನಿಮಗೆ ಶಕ್ಯವಾಗಲಾರದು. ಅವರಲ್ಲಿ ತಾಳ್ಮೆ ಸ್ವಲ್ಪು ಉಳಿಯುವದಿಲ್ಲ. ಅದುದರಿಂದ ಅವರು ನಿರಾಶೆಹೊಂದುವುದರೊಳಗೆ ಎಚ್ಚರಾಗಿರಿ. ಅವರಿಗೆ ಮುಕ್ತದ್ವಾರ ಕೊಡಿರಿ" ಎಂಬುದಾಗಿ ಗಾಂಧೀಜಿಯವರು ಸರಕಾರಕ್ಕೆ ಸಾರ್ವಜನಿಕ ಧುರೀಣರಿಗೆ ಮತ್ತು ಬಂಡವಲುದಾರರು ಹಾಗು ಉದ್ದಿಮೆದಾರರಿಗೆ ಹೇಳುತ್ತಿರುವರು.

ಬಟ್ಟೆ ಗಿರಣಿಗಳನ್ನು ನಾಶ ಮಾಡಿರೆಂದು ಅವರು ಹೇಳುವದಿಲ್ಲ "ಹೊಸ ಗಿರಣಿಗಳನ್ನು ಹಾಕಬೇಡಿರಿ, ಈಗಿದ್ದವುಗಳನ್ನು ವಿಸ್ತರಗೊಳಿಸಬೇಡಿರಿ ಖಾದಿಯ ಉತ್ಪಾದನೆ ಆಗುವ ಸ್ಥಳಗಳಿಗೆ ಗಿರಣಿ ಬಟ್ಟೆಗಳನ್ನು ಕಳಿಸಬೇಡಿರಿ ಗಿರಣಿಗಳಿಗೆ ಲಿಕ್ಕೆ ಬೇಕೆಂದು ನಿಮಗನಿಸಿದರೆ ಖಾದಿಯು ಗೂಡ ಅವು ಸ್ಪರ್ಧಿಸದಂತೆ ನೋಡಿಕೊಳ್ಳಿರಿ. ಗಿರಣಿಗಳಿದ್ದಲ್ಲೆಲ್ಲ ಕೂಲಿಕಾರರಿಗೆ ತಿನ್ನಲಿಕ್ಕೆ ಸಾಕಷ್ಟು ಅಹಾರ ದೊರೆತು ಅವರ ಮೂಲಭೂತ ಅವಶ್ಯಕತೆಗಳೆಲ್ಲ ಪೂರಯಿಸಲ್ಪಡುವಂತೆ ನೋಡಿಕೊಳ್ಳಿರಿ." ಎಂದು ಅವರು ಹೇಳಿದರು.

ಇಂದು ನೀವು ಕೋಟ್ಯವಧಿ ಜನರ ಭವಿತವ್ಯವನ್ನು ನಿಯಮಿಸುತಿರುವಿರೆಂದು ಗಾಂಧೀಜಿ ಸರಕಾರ ಮತ್ತು ಸಾರ್ವಜನಿಕ ಧುರೀಣರಿಗೆ ಹೇಳಿರುವರು. ನಿಮ್ಮ ಎಲ್ಲ ಚಟುವಟಿಕೆಗಳಲ್ಲಿ ಜನತೆಯ ಹಿತವನ್ನೆ ನೀವು ಮುಖ್ಯವಾಗಿಟ್ಟುಕೊಳ್ಳದಿದ್ದರೆ ಜನಸಾಮಾನ್ಯರು ತಮ್ಮ ಮತ್ತು ದೇಶದ ಭವಿತವ್ಯದ ಸೂತ್ರಗಳನ್ನು ತಮ್ಮ ಕಡೆಗೆ ತೆಗೆದುಕೊಳ್ಳುವ ದಿನವೊಂದು ಬರುವುದೆಂದು ಗಾಂಧೀಜಿ ಅವರಿಗೆ ಹೇಳಿರುವರು. ಸಂಕ್ಷುಬ್ಧಗೊಂಡರೆ ಜನಸಾಮಾನ್ಯರು ಆತ್ಮಹತ್ಯೆಗೂ ಸಿದ್ಧರಾಗುವರು ಮತ್ತು ಬಂಡಾಯವೇಳುವದು. ಅಜ್ಞ ಬಂಡಾಯದಿಂದ ಜಮೀನದಾರರು ಮತ್ತು ಬಂಡವಲುಗಾರರು ಮುಸ್ಲಿಂಲೀಗು ಮತ್ತು ಹಿಂದೂ ಮಹಾಸಭೆ ವಾಯಿಸರಾಯರು ಗವರ್ನರರು ಎಲ್ಲರೂ ನಾಶಹೊಂದುವರು. ಇಂಥ ಅನಾಹುತ ಪ್ರಸಂಗ ಬಂದರೆ ಅವರೆಲ್ಲರು ಕೈಕಾಲು ಬಿಡಹತ್ತುವರು. ಇಂದು ಕೈಯಲ್ಲಿ ಚೂರಿಗಳನ್ನು ಹಿಡಿದುಕೊಂಡು ಅತ್ತಿತ್ತ ಅಡ್ಡಾಡುತಿರುವವರೂ ಆ ಕಾಲದ ವರೆಗೆ ಬದುಕುಳಿದರೆ ಗುಡ್ಡುಗಳಲ್ಲಿ ಅಡಗಿ ಬಿಡುವರು. ಆದುದರಿಂದ ಸಕಾಲದಲ್ಲಿ ಜಾಗೃತರಾಗಿರೆಂದು ಗಾಂಧೀಜಿ ಎಚ್ಚರಿಸಿರುವರು. ಜನಸಾಮಾನ್ಯರು ವಿಧ್ವಂಸಕ ಪ್ರವೃತ್ತಿಗಿಳಿಯುವ ಮೊದಲೆ ಅವರಿಗೆ ಜೀವನದಾಯಿ ವಿಧಾಯಕ ಶಿಕ್ಷಣವನ್ನು ಕೊಡಿರಿ. ಸಾರ್ವಜನಿಕ ಕಾರ್ಯಕರ್ತರು ಮತ್ತು ಸರಕಾರಿ ನೋಕರರು ಖಾದಿ ಮತ್ತು ಗ್ರಾಮೋದ್ಯೋಗಗಳ ತಳಹದಿಯಮೇಲೆ ಜನರಿಗೆ ಶಿಕ್ಷಣಕೊಡಲು ಸಿದ್ಧರಾಗಬೇಕು. ಅವರು ಮೊದಲು ತಾವೆ ಆ ಕಲೆಯನ್ನು ಕಲಿತು ಅನಂತರ ಎರಡನೆಯವರಿಗೆ ಕಲಿಸಬೇಕು. ಜನತೆಯ ಕಲ್ಯಾಣ ಚಕ್ರದ ಮಧ್ಯಭಾಗದಂತಿದ್ದು ಅದರ ಸುತ್ತಲೂ ಉಳಿದುದೆಲ್ಲ ತಿರುಗತಕ್ಕದ್ದು. ವಾಯಿಸರಾಯರಿಗೆ ದಾರಿಯನ್ನು ಮುಕ್ತಮಾಡುವ ಬದಲು ಜನಸಾಮಾನ್ಯರಿಗೆ ಮುಕ್ತದ್ವಾರ ದೊರೆಯಬೇಕು.

ಕಾಕಾ ಕಾಲೇಲಕರ

---

# ಅವರ ಕೀರ್ತಿ ಆಚಂದ್ರಾರ್ಕ

೧ §

ಅಗಸ್ಟ ೧೭, ೧೯೪೬ ನೇ ದಿನ ಮುಂಜಾನೆ ಅಲಿಪುರದ ಹಿಂದೂ ಜಿಲ್ಹಾ ಜಜ್ಜನು ಚಹಾ ತೆಗೆದುಕೊಳ್ಳುವ ಮೊದಲು ದೈನಿಕ ಪತ್ರಿಕೆಯನ್ನೋದಲು ಬಯಸಿ ಕಾಯುತಿದ್ದಂತೆ ಚಹಾದ ಕರೆ ಬಂತು.

"ಪತ್ರಿಕೆ ಮಾರುವ ಹುಡುಗ ಇನ್ನೂ ಏಕೆ ಬಂದಿಲ್ಲವೋ ಅನ್ನುತ್ತೇನೆ." ಎಂದು ಕೇಳಿದನವನು.

"ಇಂದು ಪತ್ರಿಕೆಗಳು ಹೊರಡುವದಿಲ್ಲ. ಅಧಿಕಾರದಲ್ಲಿರುವ ಮುಸ್ಲಿಂ ಲೀಗ್ ಮಂತ್ರಿಮಂಡಲ ನಿನ್ನೆ ಸಾರ್ವಜನಿಕ ರಜಾದಿನವೆಂದು ಸಾರಿದೆ. ಮುಸ್ಲಿಂ ಲೀಗು ಹರತಾಳ ಮಾಡಿರೆಂದು ಆಜ್ಞಾಪಿಸಿತ್ತು."

ತಮ್ಮ ಸುತ್ತ ಏಳಲಿರುವ ಉತ್ಪಾತದ ಗಂಧವನ್ನೆ ಅರಿಯದ ಆ ನ್ಯಾಯಾಧೀಶನು ಭೋಜನ ಶಾಲೆಗೆ ಹೋಗಿ ಚಹಾ ತೆಗೆದುಕೊಳ್ಳುತಿದ್ದಂತೆ ಹತ್ತಿರದಲ್ಲೆ ವಾಸಿಸುತಿದ್ದ ಅವರ ಅಡಿಗೆಯವನ ಬಳಿ ಪ್ರಚಂಡ ತುಮುಲ ಗರ್ಜನೆಗಳ ಧ್ವನಿ ಕೇಳಿಸಿತು.

ಚಹಾವನ್ನು ಹಾಗೆಯೆ ಬಿಟ್ಟು ಅತಿ ಅವಸರದಿಂದ ನ್ಯಾಯಾಧೀಶನು ಗದ್ದಲದ ಸ್ಥಳವನ್ನು ಸೇರಿದನು. ಅಲ್ಲಿ ಅವನ ಅಡಿಗೆಯವನ ನೆರೆಮನೆಯಲ್ಲಿರುತ್ತಿದ್ದ ಒಬ್ಬ ಮುಸ್ಲಿಂ ಅಗಸನ ಮನೆಯ ಮೇಲೇರಿಬಂದು ಹಿಂದೂ ಜನಜಂಗುಳಿಯೊಂದು ಹೆಚ್ಚುಕಡಿಮೆ ಅವನ ಇಡಿ ಕುಟುಂಬವನ್ನೇ ಹೊಸಕಿಬಿಟ್ಟಿತು. ಆದರೆ ಐದು ವರ್ಷದ ಚಿಕ್ಕ ಹುಡುಗನೊಬ್ಬ ಹೇಗೋ ಕಣ್ಣು ತಪ್ಪಿಸಿಕೊಂಡು "ತ್ರಾಹಿ ತ್ರಾಹಿ" ಎಂದು ಅರಚುತ್ತ ಓಡುತ್ತಿದ್ದ.

ತನ್ನ ಮುಂದೆ ಆ ನ್ಯಾಯಾಧೀಶ ನಿಂತದ್ದನ್ನು ನೋಡಿ ಆ ಹುಡುಗ ಎರಡೂ ಕೈಗಳನ್ನು ತೆರೆದು ಭಯದಿಂದ ತಾಯಿಯ ಸೆರಗಿನಿಂದೆಂಬಂತೆ ತನ್ನ ಧೋತರದ ನೆರಿಗೆಗಳಿಂದ ಮುಖವನ್ನು ಮುಚ್ಚಿಕೊಂಡು ಅವನ ಕಡೆ ಧಾವಿಸಿ ಬಂದನು. ನ್ಯಾಯಾಧೀಶನು ಅವನನ್ನು ತೆರೆ ಕೈಯಿಂದ ಬರಮಾಡಿಕೊಂಡು, ಸಮಾಧಾನಗೊಳಿಸಲೆತ್ನಿಸುತ್ತ, "ಬಾ ಮಗು, ನಿನ್ನ ಮೇಲೆ ಕೈಯೆತ್ತುವ ಧೈರ್ಯ ಯಾರಿಗೂ ಬಾರದು" ಎಂದನು.

ಹುಡುಗನು ಕಾತರತೆಯಿಂದ ಅಳುತಿದ್ದನು. ನ್ಯಾಯಾಧೀಶನ ಕಣ್ಣುಗಳೂ ನೀರು ತುಂಬಿದವು ಅದನ್ನವನು ಇನ್ನೂ ಒರಸಿಕೊಳ್ಳುತ್ತಿದ್ದನಷ್ಟೆ ಅಷ್ಟರಲ್ಲಿ ಅತ್ಮಘಾತಕ ಉನ್ಮಾದದಿಂದ ಮತ್ತವಾಗಿದ್ದ ಆ ರಕ್ತಪಿಪಾಸು ಜನಜಂಗುಳಿ ಬಂದು ಅವನನ್ನು ಸುತ್ತುವರಿಯಿತು. "ದಯವಿಟ್ಟು ಆ ಹುಡುಗನನ್ನು ಬಿಟ್ಟುಕೊಡಿರಿ. ಅವನು ಮುಸಲ್ಮಾನ. ಅವನನ್ನು ಕೊಂದಲ್ಲದೆ ನಮಗೆ ಸಮಾಧಾನವಿಲ್ಲ," ಎಂದು ನುಡಿದರು ಆ ಕೊಲೆಗಡಕರು.

"ಆಗದು. ನಾ ಬದುಕಿರುವಷ್ಟು ಹೊತ್ತು ಇವನನ್ನು ಬಿಟ್ಟು ಕೊಡಲಾರೆ. ಈ ನಿರಪರಾಧಿ ಹುಡುಗನನ್ನು ಕೊಲ್ಲುವದರಿಂದ ನಿಮಗೇನು ಲಾಭ?"

"ಆದರೆ ಅವನು ಮುಸ್ಲಿಮನೆಂದು ನಿಮಗೆ ಗೊತ್ತೆ?"

"ಹೌದು, ಅದರಿಂದೇನು? ಅವನು ಯಾವ ಹಿಂದುವನ್ನೂ ಕೊಂದಿಲ್ಲವಷ್ಟೆ!"

"ನಿಮ್ಮ ವಾದವನ್ನು ಕೇಳಲು ನಮಗೆ ಸಮಯವಿಲ್ಲ. ಅವನನ್ನು ಇತ್ತ ಕೊಡಿರಿ."

"ಕೊಡಲಾರೆ. ಅವನು ನನ್ನ ಸಾಕುಮಗ."

"ಅವನನ್ನೊಪ್ಪಿಸಿರಿ. ಇಲ್ಲದಿದ್ದರೆ ನೀವೂ ವ್ಯರ್ಥವಾಗಿ ಪ್ರಾಣ ಕಳೆದುಕೊಳ್ಳುವಿರಿ."

"ಬೇಕಾದ್ದಾಗಲಿ. ಬೇಕಾದರೆ ನನ್ನನ್ನು ಕೊಲ್ಲಿರಿ, ಆದರೆ ನನ್ನ ದೇಹದಲ್ಲಿ ಉಸಿರು ಇರುವವರೆಗೆ ನೀವು ಅವನ ಮೇಲೆ ಕೈಯೆತ್ತಲಾರಿರಿ."

ಹಾಗೆಯೆ ಆಗಲಿ. ನಾವು ನಿಮ್ಮಿಬ್ಬರನ್ನೂ ಕೊಲ್ಲಬೇಕಾಗುವದು."

ಆ ಜನಜಂಗುಳಿ ಮೊದಲು ತಂದೆಯನ್ನು ಕೊಂದು ಬಳಿಕ ಮಗನನ್ನು ಕೊಂದಿತು. ಆ ಮೇಲೆ ಹೊಸ ಕೊಳ್ಳೆಯನ್ನರಸುತ್ತ ಪೈಶಾಚಿಕ ಕ್ರೋಧದೊಡನೆ ಹೊರಟು ಹೋಯಿತು.

ಅರ್ತರಿಗೆ ತನ್ನೊಡಲೊಳಾಶ್ರಯವನೀವವನೆ ನಿಜ ಮಾನವ
ಅವನಲ್ಲಿ ಸಮುದಾರ ಸಾನ್ನಿಧ್ಯವಿರಿಸುವನು ಪ್ರಭು ರಾಘವ

(ತುಕಾರಾಮ)

ಪುಣೆ —ವಿ. ಜಿ. ಡಿ.

೨-೧೨-೪೬

§ ಈ ಲೇಖ ಶ್ರೀಮತಿ ಶಕುಂತಲಾ ಪ್ರಭಾಕರ ಅವರು "ವಿಶ್ವವಾಣಿ" ಅಕ್ಟೋಬರ ೧೯೪೬ ರಲ್ಲಿ ಉಲ್ಲೇಖಿಸಿದ ಸಂಗತಿಗಳನ್ನು ಅವಲಂಬಿಸಿ ಬರೆಯಲ್ಪಟ್ಟಿದೆ.

---

# ಬಿಕ್ಕಟ್ಟು ಇನ್ನೂ ಬಗೆಹರಿಯಲಿಲ್ಲ?

ಹಿಂದುಸ್ತಾನದ ಸಮಸ್ಯೆಯನ್ನು ಬಿಡಿಸಲು ಬ್ರಿಟಿಶ ಸರಕಾರದವರು ಕಾಂಗ್ರೆಸ್ ಲೀಗು, ಶೀಖ ಧುರೀಣರನ್ನು ಲಂಡನ್ನಿಗೆ ಕರೆಯಿಸಿಕೊಂಡಿರುವರಷ್ಟೆ. ಈ ವರೆಗೆ ನಡೆದ ಮಾತುಕತೆಗಳು ಸಫಲವಾಗಿಲ್ಲೆಂದೂ ದುಂದುಮೇಜಿನ ಪರಿಷತ್ತಿನ 'ಶಬ್ದ ಕೂಡ ಇನ್ನೂ ಹೊರಟಿಲ್ಲೆಂದೂ ಶುಕ್ರವಾರ ಸಾಯಂಕಾಲದ ವರೆಗೆ ಬಂದ ಸುದ್ದಿಯಿಂದ ತಿಳಿಯುತ್ತದೆ. ಈ ಮಾತುಕತೆ ಯಶಸ್ವಿಯಾಗದಿದ್ದರೂ ಘಟನಾಸಮಿತಿ ಸೋಮವಾರ ೯ ನೇ ತಾರೀಕು ಕೂಡಿಯೇ ತೀರುವದು. ಮುಸ್ಲಿಂಲೀಗಿನವರು ಮಾತ್ರ ಉಪಸ್ಥಿತವಾಗಲಿಕ್ಕಿಲ್ಲ ಮುಸ್ಲಿಂ ಲೀಗಿನ ಪ್ರತಿನಿಧಿಗಳ ಅನುಪಮ ಸ್ಥಿತಿಯನ್ನು ಅಷ್ಟೊಂದು ಮಹತ್ವದ್ದೆಂದು ಭಾವಿಸಿ ಗಂಡಾಂತರ ಪರಿಸ್ಥಿತಿಯುಂಟು ಮಾಡಿಕೊಳ್ಳಬಾರದೆಂದು ಜವಾಹರಲಾಲರ ಮನವೊಲಿಸುವ ಪ್ರಯತ್ನ ನಡೆದಿನೆಂದೂ ಸದ್ದಿ. ಒಂದುವಾರ ಮುಸ್ಲಿಂಲೀಗಿಗೆ ವಿಚಾರಕ್ಕೆ ಅವಕಾಶಕೊಟ್ಟು ಅನಂತರ ಏನನ್ನಾದರೂ ನಿರ್ಧರಿಸಬೇಕೆಂದೂ ಕಾಂಗ್ರೆಸ್ಸಿಗೆ ಹೇಳಲಾಗುತ್ತದೆಯಂತೆ ಅಂತೂ ಏನಾಗುವುದೆಂಬದನ್ನು ಹೇಳಲಿಕ್ಕೆ ಬರುವದಿಲ್ಲ.

೯ನೇ ತಾರೀಕಿಗೆ ಕೂಡುವ ಘಟನಾಸಮಿತಿಯ ಕಾಲಕ್ಕೆ ಯಾರಾದರೂ ದೊಂಬಿ ಹಾಕಿದರೆ ಅವರ ಮೇಲೆ ಉಗ್ರ ಉಪಾಯ ಕೈಕೊಳ್ಳಲಾಗುವದೆಂದು ಬಂಗಾಲ ಮುಖ್ಯಮಂತ್ರಿ ಗಳಾದ ಸುರವರ್ದಿ ಸಾಹೇಬರು ಪ್ರಕಟನೆ ಹೊರಡಿಸಿದ್ದಾರೆ.

---

# ಅಸಫ ಅಲ್ಲಿ ಅಮೇರಿಕೆಯ ರಾಯಭಾರಿ

ಹಿಂದುಸ್ತಾನದ ನಡುಗಾಲ ಸರಕಾರದ ರೇಲ್ವೆ ಮಂತ್ರಿಗಳಾಗಿರುವ ಶ್ರೀ ಅಸಫಅಲ್ಲಿಯವರನ್ನು ವಾಶಿಂಗ್ಟನ್‌ದಲ್ಲಿ ಹಿಂದುಸ್ತಾನದ ರಾಯಭಾರಿಗಳನ್ನಾಗಿ ನೇಮಿಸಲಾಗಿದೆ. ಅಮೇರಿಕೆಯ ಸಂಯುಕ್ತ ಸರಕಾರದವರು ಅದಕ್ಕೆ ಔಪಚಾರಿಕವಾಗಿ ಮನ್ನಣೆ ಕೊಡುವದು ಮಾತ್ರ ಉಳಿದಿದೆ.

---

# ಹಿಂದುಸ್ತಾನ

## ಮುಂಬಯಿ

ಪುಣೆ ಕಾಂಗ್ರೆಸ ಕಮೀಟಿಯ ಅಧ್ಯಕ್ಷರೂ ಸೋಶಾಲಿಷ್ಟ ಧುರೀಣರೂ ಆಗಿರುವ ಎಸ್. ಜಿ. ಗೋರೆಯವರು ಕುಲಾಬಾ ಜಿಲ್ಹೆಯಲ್ಲಿ ಪೋಲೀಸರು ಜಾತೀಯ ಪರಿಸ್ಥಿತಿಯ ಸಂಧಿ ಸಾಧಿಸಿ ಮುಖ್ಯ ಕಾಂಗ್ರೆಸ್ ಕೆಲಸಗಾರರನ್ನೂ ಸೋಶಾಲಿಸ್ಟರನ್ನೂ ಪುಂಡರ ಕಾಯಿದೆಯನ್ವಯ ಸೆರೆಮನೆಗೆ ಅಟ್ಟುತ್ತಿದ್ದಾರೆಂದು ತಕರಾರು ಮಾಡಿದ್ದಾರೆ. ಪೋಲೀಸ ಹಾಗು ಸೈನ್ಯದ ಬಲುಮೆಯಿಂದ ನಿಜವಾದ ಶಾಂತಿ ಪ್ರಸ್ಥಾಪಿತವಾಗದೆಂದೂ ಅವರು ಅಭಿಪ್ರಾಯಪಟ್ಟಿರುವರು.

ನಗರಗಳಲ್ಲಿಯ ಹೊಲಸಿನಿಂದ ಗೊಬ್ಬರ ತಯಾರಿಸುವ ಯೋಜನೆಗೆ ಮುಂಬಯಿ ಸರಕಾರದ ಒಪ್ಪಿಗೆ ದೊರೆತಿದ್ದು ದಿಸೆಂಬರ ೧ ರಿಂದ ಇದು ಜಾರಿಯಲ್ಲಿ ಬಂದಿದೆ. ನಗರ ಸಭೆಗಳಿಗೆಲ್ಲ ಈ ಯೋಜನೆ ಅನ್ವಯಿಸುವದು. ಇದರಿಂದ ಹೆಚ್ಚೆಚ್ಚು ಗೊಬ್ಬರ ತಯಾರಿಸಲ್ಪಟ್ಟು ಹೆಚ್ಚು ಬೆಳೆ ಬೆಳೆಯಲು ಸಹಾಯವಾಗುವದು. ಇದಕ್ಕೆ ೪೫೭೦೦ ರೂಪಾಯಿ ಮಂಜೂರಾಗಿದೆ.

ಮುಂಬಯಿಯಲ್ಲಿ ೨ ನೇ ದಿನಾಂಕ ೭ ತಿವಿತಗಳು ಸಂಭವಿಸಿ ಒಬ್ಬನು ಸತ್ತ. ತಿವಿತಗಳ ಬಗ್ಗೆ ೪೫ ಜನರನ್ನು ಬಂಧಿಸಲಾಗಿದೆ. ಡೊಂಗರಿಯಲ್ಲಿ ಕಲ್ಲುಗಳ ತೂರಾಟ ನಡೆದಾಗ ಪೋಲೀಸರು ಗುಂಡು ಹಾರಿಸಿ ದಂಗೆಗಾರರನ್ನು ಚದರಿಸಿ ಅವರಲ್ಲಿ ೬ ಜನರನ್ನು ಸೆರೆ ಹಿಡಿದರು.

ಪುಣೆಯ ನವರೋಜಿ ವಾಡಿಯಾ ಕಾಲೇಜಿನ ಕರ್ನಾಟಕ ಸಂಘದ ಪರವಾಗಿ ಶನಿವಾರ ೩೦ ಕ್ಕೆ ಕನ್ನಡಿಗರ ಸಭೆ ಶ್ರೀ ಜಿ. ಪಿ. ದೀಕ್ಷಿತರ ಅಧ್ಯಕ್ಷತೆಯಲ್ಲಿ ಸೇರಿತ್ತು. ಶ್ರೀ ದ. ರಾ. ಬೇಂದ್ರೆಯವರು ಭಾಷಣಮಾಡುತ್ತ ಕನ್ನಡಿಗರು ಎಲ್ಲಿಯೆ ಇದ್ದರೂ ಕನ್ನಡಿಗರಾಗಿಯೇ ಇರಬೇಕೆಂದು ಮುಂತಾಗಿ ಹೇಳಿ ತಮ್ಮ ಕೆಲ ಕವನಗಳನ್ನೊಂದು ತೋರಿಸಿದರು. ಅಭಾರಮನ್ನಣೆಯಾಗಿ ಸಭೆ ಕೊನೆಗಂಡಿತು.

ಅಹಮ್ಮದನಗರ, ಪುಣೆ ಮತ್ತು ಸೊಲ್ಲಾಪುರ ಜಿಲ್ಹೆಗಳಲ್ಲಿಯ ನೀರಾವರಿ ಪ್ರದೇಶವನ್ನು ಹೆಚ್ಚಿಸುವುದಕ್ಕಾಗಿ ಮುಂಬಯಿ ಸರಕಾರವು ಎರಡು ದೊಡ್ಡ ಅಣೆಕಟ್ಟುಗಳನ್ನು ಕಟ್ಟಲಿದೆ. ಇವುಗಳಿಗಾಗಿ ನಾಲ್ಕೂ ಕಾಲು ಕೋಟಿ ರೂಪಾಯಿಗಳಷ್ಟು ವೆಚ್ಚ ಬರುವುದು. ಪುಣೆಯಿಂದ ೪೦ ಮೈಲುಗಳ ಅಂತರದ ಮೇಲಿನ ವೀರ ಅಣೆಕಟ್ಟಿನ ಹಾಗು ನಾಸಿಕ ಜಿಲ್ಹೆಯಲ್ಲಿಯ ಗಂಗಾಪುರ ಅಣೆಕಟ್ಟಿನ ಯೋಜನೆಗಳು ಪೂರ್ಣವಾಗಿದ್ದು ಅವುಗಳ ಕಾರ್ಯ ಬೇಗನೆ ಪ್ರಾರಂಭವಾಗಲಿರುವದು.

## ಬಂಗಾಲ

ರಾಮಗಂಜ ಜಿಲ್ಹೆಯಲ್ಲಿ ಇನ್ನೂ ಸುರಕ್ಷಿತತೆ ಎನಿಸದ್ದರಿಂದ ಹಳ್ಳಿಗರು ಜಿಲ್ಹೆಯನ್ನು ಬಿಡಹತ್ತಿರುವರು. ತಿರುಗಿ ಬರಲು ಅವರು ಒಪ್ಪದಾಗಿರುವರು ಎಂದು ತಿಳಿಯುತ್ತದೆ.

ನವಖಾಲಿ ಸಂತ್ರಸ್ತರ ಸಹಾಯಕ್ಕಾಗಿ ಪಂಜಾಬದ ಅಹಮದೀಯಾ ಪಂಗಡದ ನಾಝೀರ ಉಮರ ಖಾರಿಜಾರವರಾದ ಎಸ್. ಝೈನಾಲಾಬದೀನರವರು ಮಹಾತ್ಮರಿಗೆ ೫೦೦೦ ರೂಪಾಯಿಗಳನ್ನು ಕೊಟ್ಟಿರುವರು.

ಜಾಮನಗರ ನಾಗರಿಕರು ನವಖಾಲಿ ಪರಿಹಾರ ನಿಧಿಗೆ ೩೦ ಸಾವಿರ ರೂಪಾಯಿ ಕೊಟ್ಟಿದ್ದಾರೆ.

ಬಿಹಾರದಲ್ಲಿಯ ನಿರಾಶ್ರಿತರಿಗೆ ಕೇವಲ ೩ ಚಟಾಕ ಅಕ್ಕಿ ಅಥವಾ ಗೋವಿನಜೋಳ ಮತ್ತು ೧ ಚಟಾಕ ಬೇಳೆ ಹುಡುಗರಿಗೆ ಇದರ ಅರ್ಧ ಸೀದಾ ಕೊಡಲಾಗುವದೆಂದು ಬಂಗಾಲ ಶಾಸನ ಸಭೆಯ ಚೌಧರಿ ಮೊಯಾಜ ಹುಸೇನರು ಇತ್ತೀಚೆ ಹೊರಡಿಸಿದ ಪ್ರಕಟನೆಯನ್ನು ಬಿಹಾರ ಸರಕಾರದವರು ನಿರಾಕರಿಸುತ್ತ ಮೇಲೆ ಹೇಳಿದ ಸೀದಾ ಒಪ್ಪತ್ತಿನದಿದೆಂದು ಹೇಳಿ ಇಂಥ ಹೊಣೆಗಾರ ವ್ಯಕ್ತಿಗಳು ನಡೆಸಿದ ಅಪಪ್ರಚಾರವನ್ನು ಖಂಡಿಸಿದ್ದಾರೆ.

ಡಾಕಾದಲ್ಲಿ ೨ ನೇ ತಾ. ಸಂಜೆಯಿಂದ ಮತ್ತೆ ಗಲಭೆ ಪ್ರಾರಂಭವಾಗಿದೆ.

## ಹೊಸದಿಲ್ಲಿ

ದರ್ಯಾಗಂಜ ಶಾಂತತಾ ಸಮಿತಿಯ ಅಧ್ಯಕ್ಷ ಲಾಲಾದೇಶರಾಜ ಚೌಧರಿ ಕಾರ್ಯದರ್ಶಿ ಇರಶಾದ ನಾಸ್ರಿ ಹಾಗು ಶಹಾ ರಹಮಾನ ಅನಸಾರಿ ಇವರನ್ನೊಳಗೊಂಡ ಅನೇಕ ಜನರ ಮೇಲೆ ಪಿನಲ್ ಕೋಡಿನ ೧೦೭ ಕಲಮಿನನ್ವಯ ಅಧಿಕಾರಿಗಳು ನೋಟೀಸ ಪ್ರಯೋಗಿಸಿ ಶಾಂತತೆ ಬಗ್ಗೆ ೫೦೦ ರೂಪಾಯಿ ಜಾಮೀನ ಕೊಡಬೇಕೆಂದೂ ಸದ್ವರ್ತನೆ ಬಗ್ಗೆ ಮುಚ್ಚಳಿಕೆ ಏಕೆ ತೆಗೆದುಕೊಳ್ಳಬಾರದೆಂಬ ಬಗ್ಗೆ ಕಾರಣ ತೋರಿಸಬೇಕೆಂದೂ ವಿಧಿಸಿದ್ದಾರೆ.

ಅಂಚೆ ಮತ್ತು ತಂತಿಖಾತೆಯ ಡಾಯರೆಕ್ಟರ ಜನರಲ್‌ರಾದ ಶ್ರೀಕೃಷ್ಣ ಪ್ರಸಾದರು ಅಂಚೆಖಾತೆಯ ವಿಸ್ತರಣೆಗೆ ೪೦ ಕೋಟಿ ರೂಪಾಯಿಗಳು ಬೇಕಾಗುವವೆಂದು ಹೇಳಿದರು. ಹದಿನೈದು ವರ್ಷಗಳಲ್ಲಿ ಇಷ್ಟು ಹಣವನ್ನು ವೆಚ್ಚ ಮಾಡಲಾಗುವದು. ವಿದೇಶ ವ್ಯವಹಾರಕ್ಕೆ ಇಂಡಿಯನ್ ರೇಡಿಯೊ ಮತ್ತು ಕಮ್ಯುನಿಕೇಶನ್ಸ ಕಂಪನಿಯನ್ನು ೧೯೪೭ ಜನೆವರಿ ೧ ರಿಂದ ಸ್ಥಾಪಿಸಲಾಗುವದು.

ಅ. ಭಾ. ಟ್ರೇಡ ಯುನಿಯನ್ ಕಾಂಗ್ರೆಸ್ಸಿನ ಸಭೆ ದಿಲ್ಲಿಯಲ್ಲಿ ಸೇರಿ ಇತ್ತೀಚೆ ಔದ್ಯೋಗಿಕ ಕಲಹಗಳ ಬಗ್ಗೆ ಸ್ವೀಕೃತವಾದ ಗೊತ್ತುಗಳನ್ನು ವಿರೋಧಿಸುವ ಗೊತ್ತುವಳಿ ಸ್ವೀಕೃತವಾಯಿತು.

ಘಟನಾ ಸಮಿತಿಯ ಕಾಂಗ್ರೆಸ್ ಸದಸ್ಯರ ಸಭೆ ಡಿಸೆಂಬರ ೭ ನೇ ತಾರೀಕು ಹೊಸದಿಲ್ಲಿಯಲ್ಲಿ ಸೇರುವದೆಂದು ಕಾಂಗ್ರೆಸ್ ಅಧ್ಯಕ್ಷ ಆಚಾರ್ಯ ಕೃಪಲಾನಿಯವರು ಪ್ರಕಟಿಸಿದ್ದಾರೆ.

ಕಾಂಗ್ರೆಸಕಾರ್ಯಸಮಿತಿಯಸಭೆಯನ್ನು ಹೊಸದಿಲ್ಲಿಯಲ್ಲಿ ೮ನೇ ದಿನಾಂಕ ಪ್ರಾರಂಭಿಸಲಾಗುವದು. ಸದಸ್ಯರಲ್ಲದೆ ಮೃದುಲಾ ಸಾರಾಭಾಯಿ, ಡಾ. ಪಟ್ಟಾಭಿ, ಡಾ. ಪ್ರಫುಲ್ಲ ಘೋಷ, ಪಂ. ಪಂತ, ಶ್ರೀ ಜಯರಾಮದಾಸ ದೌಲತರಾಮ, ಫಕರುದ್ದೀನ ಅಹಮ್ಮದ, ಶ್ರೀ ಅಸಫಅಲ್ಲಿ ಮತ್ತು ಡಾ. ಕೇಸಕರರಿಗೆ ಸಭೆಗೆ ಬರಲು ಆಮಂತ್ರಣ ಕೊಡಲಾಗಿದೆ.

ಕೇಂದ್ರ ಶಾಸನ ಸಭೆ ಜಾನೇವಾರಿ ೨೦ ರಿಂದ ಪ್ರಾರಂಭವಾಗುವದು. ಈ ಸಲ ಸರಕಾರೇತರ ಕಾರ್ಯಕಲಾಪಗಳಿಗೆ ೪ ದಿನಗಳ ಬದಲು ೮ ದಿನಗಳನ್ನು ಕೊಟ್ಟಿದ್ದಾರೆ.

ಸಿಂಧೀ ಸಂಘ ಹಾಗು 'ಪೂಜ್ಯ ಪಂಚಾಯತದವರು ಕಳೆದ ರವಿವಾರ ದಿನ ಕಾಂಗ್ರೆಸ ಅಧ್ಯಕ್ಷ ಆಚಾರ್ಯ ಕೃಪಲಾನಿಯವರಿಗೆ ಮಾನಪತ್ರವನ್ನೂ ೨೨ ಸಾವಿರ ರೂಪಾಯಿಗಳನ್ನೂ ಅರ್ಪಿಸಿದರು.



## ಪಂಜಾಬ

ವೈಸರಾಯರ ಕಾರ್ಯಕಾರೀ ಮಂಡಳದ ಹಿಂದಿನ ಸದಸ್ಯರಾಗಿದ್ದ ಸರ್ ಜೋಗೇಂದ್ರಸಿಂಗರು ತಮ್ಮ ವಯಸ್ಸಿನ ೭೦ ವಯಸ್ಸಿನಲ್ಲಿ ೩ ನೇ ತಾರೀಕು ಇಕಬಲ ನಗರದ ತಮ್ಮ ಫಾರ್ಮಿನಲ್ಲಿ ಅರ್ಧಾಂಗವಾಯುವಿನಿಂದ ನಿಧನ ಹೊಂದಿದರು.

ಜರ್ಮನಿಯಲ್ಲಿಯ ಅರ್ಝಾದ ಸೇನೆಯ ಸರದಾರ ಅಜಿತಸಿಂಗರನ್ನು ಹಿಂದುಸ್ತಾನಕ್ಕೆ ಕಳಿಸುವ ಬಗ್ಗೆ ವ್ಯವಸ್ಥೆ ಮಾಡಲಾಗಿದೆಂದು ತಿಳಿಯುತ್ತದೆ. ದಿಸೆಂಬರ ಮಧ್ಯದಲ್ಲಿ ಅವರನ್ನು ಹಿಂದುಸ್ತಾನಕ್ಕೆ ಕಳಿಸಲಾಗುತ್ತದೆಂದು ತಿಳಿಯುತ್ತದೆ.

ಲಾಹೋರಿನಲ್ಲಿ ಇದೇ ೨೦ ನೇ ದಿನಾಂಕ ಸೇರುವ ಅ. ಭಾ. ವಿದ್ಯಾರ್ಥಿ ಕಾಂಗ್ರೆಸ್ಸಿನ ೧೦ ನೇ ಅಧಿವೇಶನವನ್ನು ಶ್ರೀ ಜಯಪ್ರಕಾಶ ನಾರಾಯಣರು ಪ್ರಾರಂಭಿಸುವರು. ಈ ಪರಿಷತ್ತಿನೊಂದಿಗೆ ಏಶಿಯನ್ ವಿದ್ಯಾರ್ಥಿಗಳ ಪ್ರಾಸ್ತಾವಿಕ ಪರಿಷತ್ತೂ ಕೂಡುವದು. ಈ ಕಾಲಕ್ಕೆ ವಿದ್ಯಾರ್ಥಿಗಳಿಗೊಂದು ವಿದ್ಯಾರ್ಥಿನಿಗಳಿಗೊಂದು ಹೀಗೆ ಎರಡು ಅಧಿವೇಶನಗಳು ನಡೆಯುವವು.

## ಸಿಂಧ

ಸಿಂಧ ಶಾಸನ ಸಭೆಯ ಚುನಾವಣೆ ಸಂಬಂಧದಲ್ಲಿ ಎರಡು ಪಕ್ಷಗಳಲ್ಲಿ ದ್ವೇಷ ಹೆಚ್ಚಾದ್ದರಿಂದ ಸರಕಾರದವರು ದಿನಾಂಕ ೧೫ ಕ್ಕೆ ರೇಲ್ವೆ ಇಲ್ಲವೆ ಮೋಟರದಿಂದ ಪ್ರಾಂತದಲ್ಲಿ ಯಾರೂ ಆಯುಧ ಸಹಿತ ಪ್ರವಾಸ ಮಾಡತಕ್ಕದ್ದಲ್ಲವಾಗಿ ಅಪ್ಪಣೆ ವಿಧಿಸಿದ್ದಾರೆ.

## ಸಂಯುಕ್ತಪ್ರಾಂತ

ಜಾತೀಯ ದ್ವೇಷ ಬೆಳೆಸುವ ಹಸ್ತಪತ್ರಿಕೆಗಳ ಪ್ರಸಾರ ಇತ್ತೀಚೆಗೆ ಹೆಚ್ಚಾಗಿದ್ದುದು ಕಂಡುಬರುತ್ತದೆ. ಅವುಗಳಿಗೆ ಹೊಣೆಗಾರೆ ಇದ್ದವರ ಮೇಲೆ ಉಗ್ರ ಉಪಾಯಗಳನ್ನು ಕೈಕೊಳ್ಳಲಾಗುವದು ಎಂದು ಸಂಯುಕ್ತಪ್ರಾಂತ ಸರಕಾರದವರು ಎಚ್ಚರಿಕೆ ಕೊಟ್ಟಿದ್ದಾರೆ.

ಗೋರಖಪುರದಲ್ಲಿ ಇದೇ ೨೭ರಿಂದ ೩೦ರ ವರೆಗೆ ನಡೆಯುವ ಹಿಂದೂ ಮಹಾಸಭೆಯ ಅಧ್ಯಕ್ಷಸ್ಥಾನಕ್ಕೆ ಡಾ. ಶ್ಯಾಮ ಪ್ರಸಾದ ಮುಖರ್ಜಿಯವರು ಆರಿಸಲ್ಪಟ್ಟಿರುವರು: ಮಹಾರಾಜಾ ಸರ್ ಪಟೇಶ್ವರಿ ಪ್ರಸಾದ ಸಿಂಗರನ್ನು ಸ್ವಾಗತಸಮಿತಿಯ ಅಧ್ಯಕ್ಷರನ್ನಾಗಿ ಆರಿಸಲಾಗಿದೆ. ಇದೇ ಕಾಲಕ್ಕೆ ಅ. ಭಾ. ಹಿಂದೂ ವಿದ್ಯಾರ್ಥಿ ಪರಿಷತ್ತು ವಿ. ಡಿ. ದೇಶಪಾಂಡೆಯವರ ಅಧ್ಯಕ್ಷತೆಯಲ್ಲಿ ಜರಗುವದು.

## ಸಂಸ್ಥಾನಗಳು

ಜಾತಿಗಿಂತ ರಾಷ್ಟ್ರವೇ ಮುಖ್ಯವಾದದ್ದೆಂದು ಹೈದ್ರಾಬಾದ ಸಂಸ್ಥಾನದ ದಿವಾಣರಾದ ಸರ್ ಮಿರ್ಜಾ ಇಸ್ಮಾಯಿಲ್‌ರು ಹೇಳಿದ್ದನ್ನು ಮುಸ್ಲಿಂ ಲೀಗು ಅಕ್ಷೇಪಿಸಿ ವಾದವನ್ನೆಬ್ಬಿಸಿತ್ತಷ್ಟೆ. ನಿಜಾಂ ಪ್ರಭುಗಳು ಸರ್ ಮಿರ್ಜಾರ ಶಬ್ದಗಳನ್ನೇ ಉಪಯೋಗಿಸಿ ಜಾತಿಗಿಂತ ರಾಷ್ಟ್ರವೇ ಹೆಚ್ಚಿನದೆಂಬುದಕ್ಕೆ ಮನ್ನಣೆಯಿತ್ತು ಈ ವಿವಾದವನ್ನು ಮುಗಿಸಿದ್ದಾರೆ.

# ಕ ರ್ನಾ ಟ ಕ

## ಧಾರವಾಡ

ಧಾರವಾಡ ಕೆ. ಈ. ಬೋರ್ಡ ಆರ್ಟ್ಸ್ ಕಾಲೇಜಿನ ವಾರ್ಷಿಕೋತ್ಸವ ಪ್ರಾಧ್ಯಾಪಕ ಆರ್. ಸದಾಶಿವ ಅಯ್ಯರ ಇವರ ನೇತೃತ್ವದಲ್ಲಿ ನಡೆಯಿತು. ಆ ಕಾಲಕ್ಕೆ ದಿವಂಗತ ಬಿ. ಎಂ. ಶ್ರೀ ಕಂಠಯ್ಯನವರ ಭಾವಚಿತ್ರವನ್ನು ಅನಾವರಣ ಮಾಡಲಾಯಿತು. ಅಯ್ಯರರು ಸಮಯೋಚಿತ ಭಾಷಣ ಮಾಡಿ ಶ್ರೀಯವರ ಗುಣಗಾನ ಮಾಡಿದರು. ಶ್ರೀ ನಾಯಕ ವೆಂಕಟರಾಯರೂ ಮಾತಾಡಿ ಶ್ರೀಯವರ ತೇಜಸ್ವಿ ವ್ಯಕ್ತಿತ್ವವನ್ನು ಕೊಂಡಾಡಿದರು.

ರಾಣೇಬೆನ್ನೂರ ಕರ್ನಾಟಕ ಸಂಘವು ೧೯೩೬ ರಲ್ಲಿ ಸ್ಥಾಪಿತವಾಗಿ ಕಳೆದ ೧೦ ವರುಷಗಳಿಂದ ಸಾಹಿತ್ಯ ಸೇವೆ ಮಾಡುತ್ತ ಬಂದಿದೆ. ಮುನಸಿಪಾಲಿಟಿಯವರು ಸಂಘಕ್ಕೊಂದು ಸ್ಥಳಕೊಟ್ಟಿದ್ದು ಕಟ್ಟಡ ಕಟ್ಟಿಸುವದಕ್ಕಾಗಿ ನಿಧಿಯನ್ನು ಸಂಗ್ರಹಿಸುತ್ತಲಿರುವರು. ಮಹಾಜನರು ಧನಸಹಾಯ ಸಲ್ಲಿಸಬೇಕಾಗಿ ಅಧ್ಯಕ್ಷರು ಬಿನ್ನವಿಸಿದ್ದಾರೆ.

ದಿಲ್ಲಿಯಲ್ಲಿ ೮ ನೇ ತಾರೀಕು ಕೂಡಲಿರುವ ಭಾಷಾವಾರ ಪ್ರಾಂತರಚನೆಯ ಪರಿಷತ್ತಿಗೆ ಕರ್ನಾಟಕ ಏಕೀಕರಣ ಸಂಘದ ಅಧ್ಯಕ್ಷ ಶ್ರೀ ಜಿನರಾಜ ಹೆಗಡೆಯವರು ಹೋಗಿರುವರು. ಘಟನಾ ಸಮಿತಿಯ ಸದಸ್ಯರಿಗೆ ಏಕೀಕರಣದ ಪ್ರಶ್ನೆಯನ್ನು ತಿಳಿಸುವದಕ್ಕಾಗಿ ಸಂಘದವರು ೬೪ ಪುಟಗಳ ಇಂಗ್ಲಿಶ್ ಪುಸ್ತಕವನ್ನು ಪ್ರಸಿದ್ಧಿಸಿದ್ದು ಪ್ರಕಟನೆಯ ವೆಚ್ಚ ದಿಲ್ಲಿ ವೆಚ್ಚ ಇವುಗಳನ್ನು ಲಕ್ಷ್ಯದಲ್ಲಿಟ್ಟು ಅದರ ಬೆಲೆಯನ್ನು ೩॥ ರೂಪಾಯಿ ಇಟ್ಟಿದೆ. ಬೇಕಾದವರು ಸಹಾಯ ಮಾಡುವ ದೃಷ್ಟಿಯಿಂದ ಈ ಪ್ರತಿಗಳನ್ನು ಪಡೆಯಬಹುದೆಂದು ಉಪಾಧ್ಯಕ್ಷ ಶ್ರೀ ಆರ್. ವಿ. ಜಾಗಿರದಾರರು ಬಿನ್ನವಿಸುತ್ತಾರೆ.

## ವಿಜಾಪುರ

ಇಂಡಿ ತಾಲೂಕಿನಲ್ಲಿ ಚೂರಿ ಚಾಕು ಮುಂತಾದ ಹದನಾದ ಆಯುಧಗಳನ್ನು ತಯಾರಿಸಬಾರದು, ಆಯಾತ ನಿರ್ಯಾತ ಮಾಡಬಾರದು ಎಂದು ಇಂಡಿ ತಾಲೂಕ ಮ್ಯಾಜಿಸ್ಟ್ರೇಟರು ಅಜ್ಞೆ ಹೊರಡಿಸಿದ್ದಾರೆ. ಮೊಹರಮ್ಮ ಶತೇಶ್ವರ ಜಾತ್ರೆಯ ನಿಮಿತ್ತ ಈ ಹುಕುಮು ಹೊರಡಿಸಲಾಗಿದ್ದು ಒಂದು ತಿಂಗಳ ಜಾರಿಯಲ್ಲಿರುವದು.

## ಉತ್ತರ ಕನ್ನಡ

ಕಾರವಾರದಲ್ಲಿ ೨೮ ನೆ ರಾತ್ರಿ ಗೋವೆ ಗಡಿಯ ಸಾನಮಾಡಗೇರಿ ಎಂಬ ಹಳ್ಳಿಯಲ್ಲಿ ಸೇವಾದಲದ ೪೬ ತರುಣರು ಗೋವೆಗೆ ಹೋಗುವ ಅಕ್ಕಿಯನ್ನು ಹಿಡಿಯಲು ಅಬಕಾರಿ ಸಿಪಾಯರೊಡನೆ ಹೋಗುವಾಗ ಹಾದಿಯಲ್ಲಿ ಯಾರೋ ಒಬ್ಬರು ಅವರ ಮೇಲೆ ಬಂದೂಕು ಹಾರಿಸಿದ್ದರಿಂದ ಕೃಷ್ಣಾನಂದ ಬಾಬೂ ನಾಯಕ ಎಂಬ ಇಂಗ್ಲಿಶ್ ೫ ನೇ ಇಯತ್ತೆಯ ವಿದ್ಯಾರ್ಥಿ ತಗಲಿ ಮೊಣಕಾಲಿನಲ್ಲಿ ಒಂದು ಇಂಚು ತೂತು ಬಿದ್ದಿದೆ. ಆಸ್ಪತ್ರಿಯಲ್ಲಿ ಉಪಚಾರ ನಡೆದಿದೆ.

ಮುಂಬಯಿ ಸರಕಾರದ ಔದ್ಯೋಗಿಕ ಮಂತ್ರಿ ಶ್ರೀ ಜಿ. ಡಿ. ತಪಾಸೆಯವರು ಡಿಸೆಂಬರ ೧೧ ನೇ ತಾರೀಕು ಕಾರವಾರಕ್ಕೆ ಬಂದು ಎರಡು ದಿನ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಂಚರಿಸಿ ಮೀನಗಾರಿಕೆಯ ಕೇಂದ್ರಗಳನ್ನೂ ಶಾಲೆಗಳನ್ನೂ ಸಂದರ್ಶಿಸಲಿದ್ದಾರೆ.

ಅಂಕೋಲೆ ತಾಲೂಕಿನಲ್ಲಿ ಮೈಲಿಬೇನೆ ವಿಪರೀತ ಹಬ್ಬಿತ್ತು. ಇಲ್ಲಿಗೆ ವರ್ಗ ಆಗಿ ಬಂದ ಶ್ರೀ ಎ. ಪಿ. ನಾಯ್ಕರು ಈ ವರೆಗೆ ೧೦೫೦೦ ಜನರಿಗೆ ಮೈಲೀ ಚುಚ್ಚಿದ್ದರಿಂದ ಬೇನೆ ಬಹಳ ಮಟ್ಟಿಗೆ ಕಡಿಮೆಯಾಗಿದೆ. ಮೈಲೀ ಬೇನೆ ಸುರುವಾದಂದಿನಿಂದ ೧೩೦ ಜನರಿಗೆ ಅದು ತಗಲಿ ೩೦ ಜನರು ಮರಣ ಹೊಂದಿರುವರು.

ಭಟಕಳ ನಗರ ಸಭೆಗೆ ಹಾಜಿ ಸಯ್ಯದ ಮೊಹದ್ದೀನ ಅಂಬಾರ ಇವರು ಅಧ್ಯಕ್ಷರಾಗಿಯೂ ಮೂಲಿಮ ಸಾಹೇಬರು ಉಪಾಧ್ಯಕ್ಷರಾಗಿಯೂ ಆರಿಸಲ್ಪಟ್ಟರು.

## ಬೆಳಗಾವಿ

ಬೆಳಗಾವಿ ಜಿಲ್ಲೆಯ ಕರ್ನಾಟಕ ಏಕೀಕರಣ ಪರಿಷತ್ತಿನ ಮೊದಲನೆ ಅಧಿವೇಶನ ನಂದಗಡದಲ್ಲಿ ಜಾನೇವರಿ ೧೨ ಕ್ಕೆ ಕೂಡಲಿದೆ ಜಿಲ್ಲೆಯಲ್ಲಿಯ ಎಲ್ಲ ಕನ್ನಡಿಗರ ಸಂಘಗಳ ವಿಳಾಸವನ್ನು ತಿಳಿಸಬೇಕೆಂದು ಸ್ವಾಗತಸಮಿತಿಯವರು ಬಿನ್ನವಿಸಿಕೊಂಡಿದ್ದಾರೆ. ಈ ಪರಿಷತ್ತು ಶ್ರೀ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಜರಗುವದು. ಬಸಪ್ಪಾ ಅರಗಾವಿಯವರು ಸ್ವಾಗತಾಧ್ಯಕ್ಷರಾಗಿ ಆರಿಸಲ್ಪಟ್ಟಿರುವರು.

ಗೋಕಾಕ ತಾಲೂಕಿನ ಹಳ್ಳೂರ ಭಾಗದಲ್ಲಿ ಕಾಂಗ್ರೆಸ ಹೆಸರಿನಲ್ಲಿ ನಡೆದ ದರವಡೆ, ಅತ್ಯಾಚಾರ ಮೊದಲಾದವುಗಳ ಬಗ್ಗೆ ವಿಚಾರಮಾಡಲು ಶ್ರೀ ಎಸ್. ನಿಜಲಿಂಗಪ್ಪನವರು, ಶೇಖಸಾಹೆಬರು ಹಾಗು ವೆಂಕರಡ್ಡಿಯವರೊಡನೆ ಹೋಗಿ ಜನರ ಹೇಳಿಕೆಗಳನ್ನು ಕೇಳಿಕೊಂಡು ಈ ಬಗ್ಗೆ ಯೋಗ್ಯ ವ್ಯವಸ್ಥೆ ಮಾಡುವದಾಗಿಯೂ ಹೆದರುವ ಅವಶ್ಯಕತೆಯಿಲ್ಲೆಂದೂ ಅಶ್ವಾಸನಕೊಟ್ಟರು.

೧೯೪೪ ರಲ್ಲಿ ಲೋ ಬೋ ಎಂಬ ಪ್ರವಾಸಿಕರು ತಮ್ಮ ಕುಟುಂಬದೊಂದಿಗೆ ಹೋಗುವಾಗ ಲೋಂಡಾ ಸ್ಟೇಶನದಲ್ಲಿ ವಿಶೇಷ ದಟ್ಟಣೆಮೂಲಕ ಬಾಗಿಲಿನಲ್ಲಿ ನಿಂತಾಗ ನೀರು ತೆಗೆದುಕೊಳ್ಳಲು ಹೋದಎಂಜಿನಿನ ಧಕ್ಕೆತಗಲಿ ಪ್ಲ್ಯಾಟಫಾರ್ಮಿನಮೇಲೆ ಬಿದ್ದು ಮರಣ ಹೊಂದಿದ್ದರ ಬಗ್ಗೆ ಕೋರ್ಟಿನವರು ೮೩೮೦ ರೂಪಾಯಿಗಳನ್ನು ರೇಲ್ವೆಯವರು ನಷ್ಟಪರಿಹಾರವೆಂದು ಕೊಡಬೇಕೆಂದು ನಿರ್ಣಯಿಸಿದರು.

ಬೆಳಗಾವಿಯಲ್ಲಿ ಶ್ರೀ ತೆಲಸಂಗ ಇವರ ಅಂಗಡಿಯನ್ನು ಝಡತಿ ಮಾಡಲಾಗಿ ೧೫೦ ಗ್ರೋಸ ಕಡ್ಡಿಪೆಟ್ಟಿಗೆಗಳು ದೊರೆತಿವೆ.

ಗೋವೆಯ ಪೋಲೀಸರ ಅತ್ಯಾಚಾರವನ್ನು ಪ್ರತಿಭಟಿಸಲು ಗೋವೆಯ ರಾಷ್ಟ್ರೀಯ ಸಭೆಯ ಅಧ್ಯಕ್ಷ ಶ್ರೀ ಇವೆಗ್ರೀವ ಜಾರ್ಜರು ಉಪವಾಸ ಕೈಕೊಳ್ಳಲಿರುವರು.

## ಕನ್ನಡ ಸಂಸ್ಥಾನ

ಕಲಬುರ್ಗಿಯ ವರ್ತಕರಾಗಿದ್ದ ದಿ. ಗೋಪಾಳರಾವ ಪಟ್ಟಣಕರ ಇವರ ಸ್ಮಾರಕವೆಂದು ಅವರ ಮಕ್ಕಳು ಅಲ್ಲಿಯ ಕನ್ನಡ ಸಾಹಿತ್ಯ ಸಂಘಕ್ಕೆ ಬಾನುಲಿ ಕೊಡಿಸುವ ವಾಗ್ದಾನ ಮಾಡಿದ್ದಾರೆ. ಶ್ರೀ ರಾಯ ಪಾಂಡುರಂಗರಾಯರು ೩೦೦ ರೂ. ಬೆಲೆ ಬಾಳುವ ಕಲ್ಲು ಕೊಡಿಸಿದ್ದಾರೆ.

ಮೈಸೂರ ಸರಕಾರದವರು ಸರಕಾರಿ ನಾನ್ ಗಜೆಟಿಡ್ ಹಾಗು ಕೆಳದರ್ಜೆಯ ನೋಕರರ ವೇತನದ ಪ್ರಮಾಣವನ್ನು ಪರಿಶೀಲಿಸಲು ರಾಜಧರ್ಮಪ್ರಸಕ್ತ ಶ್ರೀ. ಟಿ. ಸಿಂಗಾರ ವೇಲು ಮುದಲಿಯಾರರ ಅಧ್ಯಕ್ಷತೆಯಲ್ಲಿ ಸಮಿತಿ ಸ್ಥಾಪಿಸಿದ್ದಾರೆ. ತಕ್ಕ ಪರಿಶೀಲನೆ ಮಾಡಿ ಸಮಿತಿಯು ತನ್ನ ಸೂಚನೆಗಳನ್ನು ಬೇಗನೆ ಸರಕಾರದೆದುರು ಮಂಡಿಸಬಹುದೆಂದು ತಿಳಿಯುತ್ತದೆ.

ಮಿರಜಿಯಲ್ಲಿ ಪೈಗಂಬರವಾಸಿ ಖಾನ ಅಬ್ದುಲ್ ಕರೀಮಖಾನ ಸಾಹೇಬರ ಸ್ಮಾರಕವೆಂದು ಅವರ ಬಂಗಲೆಯ ಎದುರಿಗೆ ಕಟ್ಟಡ ಕಟ್ಟುವದನ್ನು ಸ್ಮಾರಕಸಮಿತಿಯವರು ಪ್ರಾರಂಭಿಸಲಿರುವರು. ಇದಕ್ಕಾಗಿ ೨೫ಸಾವಿರ ರೂಪಾಯಿ ಬೇಕಾಗುವದು. ಇದಕ್ಕೆ ಸಹಾಯ ಮಾಡುವವರು ಡಿಸೆಂಬರ ೧೫ ರೊಳಗಾಗಿ ಸ್ಮಾರಕ ಸಮಿತಿಯ ಕಡೆಗೆ ಕಳಿಸಬೇಕೆಂದು ಅಧ್ಯಕ್ಷ ದತ್ತಾತ್ರಯ ಶಿವರಾಮ ಭಡಭಡೆಯವರು ಪ್ರಸಿದ್ಧಿಸುತ್ತಾರೆ.

ಹರಿಹರದಲ್ಲಿ ೧೪ ವರ್ಷದ ಹಿಂದೂ ವಿವಾಹಿತ ಸ್ತ್ರೀಯೊಬ್ಬಳನ್ನು ಒಬ್ಬ ಮುಸಲ್ಮಾನನಿಗೆ ಪುನರ್ವಿವಾಹ ಮಾಡಬೇಕೆಂದು ಕೆಲ ಮುಸಲ್ಮಾನರು ಪ್ರಯತ್ನ ನಡೆಸಿದ್ದನ್ನು ಪೋಲೀಸರು ಕಂಡು ಹಿಡಿದು ಅದನ್ನು ತಪ್ಪಿಸಿದರು. ಹಲವು ಜನರನ್ನು ಸೆರೆಹಿಡಿದು ದಾವಣಗೆರೆ ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ಖಟ್ಲೆ ಹಾಕಿರುವರು. ಆ ಸ್ತ್ರೀಯನ್ನು ಗಂಡನ ವಶಕ್ಕೆ ಕೊಡುವಲ್ಲಿ ಹರಿಹರದ ಯಂಗಮೆನ್ಸ ಅಸೋಸಿಯೇಶನ್ನಿನವರು ಬಹಳ ಸಹಾಯ ಮಾಡಿದರು. ಆ ಹೆಣ್ಣುಮಗಳಗೂಡ ಅವಿನಯದಿಂದ ನಡೆದುಕೊಂಡದ್ದಕ್ಕೆ ಒಬ್ಬನಿಗೆ ೨೦ ರೂಪಾಯಿ ದಂಡ ವಿಧಿಸಲಾಯಿತು.

ನಾಗಮಂಗಲ ತಾಲೂಕಿನ ಬೆಲ್ಲೂರಿನಲ್ಲಿ ಹಾಯಸ್ಕೂಲ ತೆರೆಯಲು ಅಂಕನಹಳ್ಳಿ ಕೆಂಪೇಗೌಡರು ೪೦ ಸಾವಿರ ರೂಪಾಯಿ ಕೊಡಲು ವಾಗ್ದಾನವಿತ್ತು ಈಗ ೨೦ ಸಾವಿರ ರೂಪಾಯಿ ಕೊಟ್ಟಿರುವರು. ಇವರು ಈಗ ಉದಕಮಂಡಲದಲ್ಲಿರುವರು.



## ಬೆಳಗಾವಿ—ಕಾರವಾರ ಜಿಲ್ಲೆಗಳಲ್ಲಿ ಪುನರ್ರಚನಾ ಮಂತ್ರಿಗಳು

ಪುನರ್ರಚನಾ ಮಂತ್ರಿಗಳಾದ ಮಾನ್ಯ ಎಲ್. ಎಂ. ಪಾಟೀಲರು ೯ನೇ ತಾರೀಕು ಸಾಯಂಕಾಲ ಮುಂಬಯಿಯಿಂದ ಹೊರಟು ೧೦ ನೇ ತಾರೀಕು ಮುಂಜಾನೆ ೮—೨೦ ಕ್ಕೆ ಬೆಳಗಾವಿ ಮುಟ್ಟುವರು. ೧೦-೧೧ ಎರಡು ದಿನ ಬೆಳಗಾವಿಯಲ್ಲಿ ಪುನರ್ರಚನಾ ಪರಿಷತ್ತು ಸೇರುವದು. ೧೨ ನೇ ತಾರೀಕು ಮುಂಜಾನೆ ೮ ಗಂಟೆಗೆ ಮೋಟಾರಿನಿಂದ ಬೆಳಗಾವಿಯಿಂದ ಹೊರಟು ಮಧ್ಯಾಹ್ನ ೧೨ ಕ್ಕೆ ಕಾರವಾರ ಮುಟ್ಟುವದು. ೧೩—[illegible] ಎರಡುದಿನ ಕಾರವಾರದಲ್ಲಿ ಪುನರ್ರಚನಾ ಪರಿಷತ್ತು ಸೇರುವದು. ೧೫ ನೇ ಡಿಸೆಂಬರ ದಿನ ಮಾನ್ಯ ಮಂತ್ರಿಗಳು ಕಾರವಾರದಿಂದ ಮುಂಜಾನೆ ಹೊರಟು ಬೆಳಗಾವಿಗೆ ಬಂದು ಸಾಯಂಕಾಲ ೬-೩೦ ರ ಗಾಡಿಯಿಂದ ಮುಂಬಯಿಗೆ ಮರುಳುವರು.

ಶಿರ್ಶಿ ಮುನಿಸಿಪಾಲಿಟಿಯ ಅಧ್ಯಕ್ಷರ ಅಯ್ಯೆಯಾಗಿ ಶ್ರೀ ಗಜಾನನರಾವ ನಾಡಿಗರು ಅಧ್ಯಕ್ಷರಾಗಿಯೂ ಮಸ್ಕಾರನ್ಹಸ್ ಇವರು ಉಪಾಧ್ಯಕ್ಷರಾಗಿಯೂ ಆರಿಸಲ್ಪಟ್ಟರು.





## ಬೆಂಗಳೂರು-ಮೈಸೂರು

ಮೈಸೂರು ಸೆಂಟ ಫಿಲೋಮಿನಾ ಕಾಲೇಜಿನ ಭೌತಶಾಸ್ತ್ರ ಸಂಘದ ಆರಂಭೋತ್ಸವ ಜರಗಿಸುತ್ತ ಪ್ರಸಿದ್ಧ ವೈಜ್ಞಾನಿಕರಾದ ಸರ್. ಸಿ. ವಿ. ರಾಮನರು ಮಾನವನ ಅಭಿವೃದ್ಧಿಗಾಗಿ ನಿಯೋಜಿಸಲ್ಪಟ್ಟ ವಿಜ್ಞಾನವನ್ನು ವಿನಾಶಕ್ಕಾಗಿ ಉಪಯೋಗಿಸುವದನ್ನು ತೀಕ್ಷ್ಣವಾಗಿ ಖಂಡಿಸಿದರು.

ಹಿಂದುಸ್ತಾನದೊಡನೆ ವ್ಯಾಪಾರ ಸಂಬಂಧದ ಸಾಧ್ಯಾಸಾಧ್ಯತೆಗಳನ್ನು ಪರಿಶೀಲಿಸಲು ಬಂದಿರುವ ಅಸ್ಟ್ರೇಲಿಯಾದ ವಾಣಿಜ್ಯ ಶಿಷ್ಟಮಂಡಲದ ಸದಸ್ಯರು ಬೆಂಗಳೂರಿನ ವಾಣಿಜ್ಯ ಸಂಘಕ್ಕೆ ಸಂದರ್ಶನವಿತ್ತಾಗ ಅವರ ನಾಯಕರಾದ ಶ್ರೀ ಮಿಕ್ಯಾಕರು ಅಸ್ಟ್ರೇಲಿಯಾದಲ್ಲಿ ಶ್ರೀಮಂತ ಕುಲದವರೆಂಬುವದಿಲ್ಲವಮತ್ತು ಅಲ್ಲಿ ವಿದೇಶಿ ಬಂಡವಾಳವೇ ಇಲ್ಲ ಎಂದೂ ಅತಿಪ್ರಸರಣವನ್ನು ತಡೆಯಲು ಸಕಾಲಕ್ಕೆ ಯೋಗ್ಯ ಉಪಾಯವನ್ನು ಕೈಕೊಂಡದ್ದರಿಂದ ಆರು ವರ್ಷ ಯುದ್ಧದ ಸುಳಿಯಲ್ಲಿ ಸಿಕ್ಕಿದ್ದರೂ ಅಲ್ಲಿ ಜೀವನದ ವೆಚ್ಚ ನೂರಕ್ಕೆ ೩೦ ಕ್ಕಿಂತ ಏರಿಲ್ಲವೆಂದೂ ತಿಳಿಸಿದರು. ಹಿಂದುಸ್ತಾನದ ಜೀವನ ವೆಚ್ಚ ಅಳತೆಗೆಟ್ಟು ಏರಿದ್ದರಿಂದ ಇಲ್ಲಿಯ ಸರಕುಗಳ ಬೆಲೆ ಬಹಳವಾಗಿದೆಯೆಂದೂ ಅದರಿಂದ ತಾವು ಆಯಾತ ಮಾಡಿಕೊಳ್ಳುವದು ಕಠಿನವೆಂದೂ ಅವರು ಹೇಳಿದರು.

ಮೈಸೂರಿನ ಔದ್ಯೋಗಿಕ ಪ್ರಗತಿ ಭರದಿಂದ ಸಾಗಿದೆಯೆಂದೂ ಮೈಸೂರಿಗೂ ಅಸ್ಟ್ರೇಲಿಯಾಕ್ಕೂ ವಾಣಿಜ್ಯ ವಿಷಯದಲ್ಲಿ ಮಾತ್ರವಲ್ಲದೆ ಇತರ ವಿಷಯಗಳಲ್ಲಿಯೂ ಗಾಢಮೈತ್ರಿ ನೆಲೆಗೊಳ್ಳಬೇಕೆಂದೂ ಮೈಸೂರು ದಿವಾಣರಾದ ಸರ್ ರಾಮಸ್ವಾಮಿ ಮುದಲಿಯಾರರು ಅಸ್ಟ್ರೇಲಿಯಾದ ವಾಣಿಜ್ಯ ಶಿಷ್ಟಮಂಡಲದವರ ಗೌರವಾರ್ಥ ಬೆಂಗಳೂರಲ್ಲಿ ಏರ್ಪಡಿಸಲಾಗಿದ್ದ ಸಂತೋಷಕೂಟದಲ್ಲಿ ಹೇಳಿದರು. ಶಿಷ್ಟಮಂಡಲದ ನಾಯಕರು ಮೈಸೂರಿನ ಆರ್ಥಿಕ ಪ್ರಗತಿಯನ್ನು ಹೊಗಳಿದರು.

ಭಾರತೀಯ ಕಮ್ಯುನಿಷ್ಟ ಪಕ್ಷದ ಕರ್ನಾಟಕ ಸಮಿತಿಯ ಕಾರ್ಯದರ್ಶಿ ಶ್ರೀ ಎನ್. ಎಲ್. ಉಪಾಧ್ಯಾಯರನ್ನು ಮೈಸೂರು ಸಂಸ್ಥಾನದಿಂದ ಗಡಿಪಾರು ಮಾಡಲಾಗಿದೆ. ವಿಪ್ಲವಕಾರಿ ಚಟುವಟಿಕೆಯ ಅಪಾದನೆ ಅವರ ಮೇಲೆ ಹೊರಿಸಲ್ಪಟ್ಟಿದೆ.

ಮೈಸೂರು ವಿಧಾಯಕ ಸಭೆಯ ಅಧಿವೇಶನ ಡಿಸೆಂಬರ ೯ ಕ್ಕೆ ಪ್ರಾರಂಭವಾಗಿ ೧೪ ನೇ ತಾರೀಖಿನ ವರೆಗೆ ನಡೆಯುವದು. ಈ ಸಭೆಗಾಗಿ ೨೧೪ ಚುಕ್ಕಿ ಪ್ರಶ್ನೆಗಳೂ ೭ ಚುಕ್ಕಿಯಿಲ್ಲದ ಪ್ರಶ್ನೆಗಳೂ ೪೩ ಖಾಸಗಿ ನಿರ್ಣಯಗಳೂ ೪ ಸರಕಾರಿ ಮಸೂದೆಗಳೂ ಬಂದಿವೆ. ಹಿಂದುಸ್ತಾನದ ಘಟನಾಸಮಿತಿಗೆ ಮೈಸೂರಿನ ಪ್ರತಿನಿಧಿಗಳನ್ನು ಪ್ರತಿನಿಧಿ ಹಾಗು ವಿಧಾಯಕ ಸಭೆಗಳ ಜತೆ ಅಧಿವೇಶನದಲ್ಲಿ ಆರಿಸಬೇಕೆಂಬ ಶ್ರೀ ಎಂ. ಎ. ಗೋಪಾಲಸ್ವಾಮಿ ಅಯ್ಯಂಗಾರ ಹಾಗು ಶ್ರೀಮತಿ ಲಕ್ಷ್ಮಮ್ಮನವರ ಗೊತ್ತುವಳಿ ಎಲ್ಲಕ್ಕೂ ಮಹತ್ವದ್ದು ಇತರ ಮಹತ್ವದ ಗೊತ್ತುವಳಿಗಳಲ್ಲಿ ಸಂಸ್ಥಾನದಲ್ಲಿ ಸಾರ್ವತ್ರಿಕ ಪಾನನಿರೋಧವನ್ನು ಜಾರಿಯಲ್ಲಿ ತರಬೇಕು; ಹೈಸ್ಕೂಲು ಕಾಲೇಜುಗಳಲ್ಲಿ ಮೂರುವರ್ಷ ಒತ್ತಾಯದ ಸೈನಿಕ ಶಿಕ್ಷಣ ಕೊಡಬೇಕು; ಅಸ್ಪೃಶ್ಯತೆಯನ್ನು ಕಾಯದೇಬಲದಿಂದ ಕಿತ್ತುಹಾಕಬೇಕು ಮೊದಲಾದವುಗಳನ್ನು ಉಲ್ಲೇಖಿಸಬಹುದು.

ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ ಕೆ. ಚಂಗಲರಾಯ ರೆಡ್ಡಿಯವರು ತಮ್ಮ ಅಧಿಕಾರಗ್ರಹಣದ ಮೊದಲನೆ ಪತ್ರಿಕಾಪರಿಷತ್ತಿನಲ್ಲಿ ಮೈಸೂರು ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನು ವಿಶದ ಗೊಳಿಸಿದರು. ಮೈಸೂರು ಕಾಂಗ್ರೆಸ್ಸು ರಾಜಪ್ರಭುತ್ವಕ್ಕೆ ಎಂದೂ ವಿರೋಧಿಯಾಗಿದ್ದಿಲ್ಲೆಂದೂ ಶ್ರೀಮನ್ಮಹಾರಾಜರ ಕೃಪಾಶ್ರಯದಲ್ಲಿ ಹೊಣೆಗಾರ ಸರಕಾರವನ್ನು ಸ್ಥಾಪಿಸುವದೇ ತಮ್ಮ ಧ್ಯೇಯವೆಂದೂ ಹೇಳಿ ಅವರು ಕಾಂಗ್ರೆಸ್ಸು ಹೋರಾಟಕ್ಕಾಗಿ ಆತುರಪಡುತ್ತಿಲ್ಲವಾದರೂ ಹೋರಾಟವಲ್ಲದೆ ಇಂದು ತಮ್ಮ ಧ್ಯೇಯಸಾಧನೆಗಾವ ಮಾರ್ಗವೂ ಉಳಿದಂತಿಲ್ಲವಾದುದರಿಂದ ಅದು ಇನ್ನು ತೆಪ್ಪಗೆ ಕೂಡಲಾರದೆಂದರು. ಸಂಸ್ಥಾನ ಸಂಧಾನ ಸಮಿತಿ ಪ್ರಜಾಸತ್ತಾತ್ಮಕವಾಗಿ ಪುನರ್ಘಟಿತವಾದ ಹೊರತು ಭಾರತೀಯ ಕಾಂಗ್ರೆಸ್ಸು ಅದನ್ನು ಅಂಗೀಕರಿಸಕೂಡದೆಂದು ಅವರ ಅಭಿಪ್ರಾಯವಾಗಿತ್ತು.

ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳು ದಿ. ಮಾಲವಿಯವರ ಬಗ್ಗೆ ದುಃಖಾಶ್ರು ಗೊತ್ತುವಳಿಯನ್ನು ತರಲು ಅನುಮತಿ ಕೊಡಲಿಲ್ಲ ಮೊದಲಾದ ಕಾರಣಗಳಿಗಾಗಿ ವಿಶ್ವವಿದ್ಯಾಲಯ ಸಂಘದ ಕಾರ್ಯ ಸಮಿತಿ ನಿರ್ಣಯಿಸಿದಂತೆ ವಿದ್ಯಾರ್ಥಿಗಳು ಮುಷ್ಕರ ನಡೆಸಿದುದು ಸರಿಯಷ್ಟೆ. ಅವರೀಗ ವಿ. ವಿ. ಸಂಘದ ಕೇಂದ್ರ ಮಹಾಸಭೆ ಸೇರಿಸಿ ಅದರ ನಿರ್ಣಯಕ್ಕನುಸಾರ ಕ್ರಮ ಕೈಕೊಳ್ಳಬೇಕೆಂದು ನಿರ್ಧರಿಸಿ ಮುಷ್ಕರವನ್ನು ಮುಂದೆ ಹಾಕಿದ್ದಾರೆ.

ಮೈಸೂರು ನಗರದ ಕೇಂದ್ರ ಆಹಾರ ಉಗ್ರಾಣದಿಂದ ನಡು ರಾತ್ರಿಯಲ್ಲಿ ಎರಡು ಚೀಲ ಅಕ್ಕಿಯನ್ನು ಕದ್ದು ವ್ಯಾಪಾರಿಯೊಬ್ಬನಿಗೆ ಕಳ್ಳ ಸಂತೆಯಲ್ಲಿ ಮಾರಿದರೆಂಬ ಆರೋಪದಿಂದ ರಾಮರಾಜು ನಂಜುಂಡರಾಜು ಎಂಬಿಬ್ಬರು ಪೋಲೀಸರು ಸೆರೆಹಿಡಿಯಲ್ಪಟ್ಟಿದ್ದಾರೆ.

ಲಾಹೋರಿನ ಭಾರತ ವಿಮಾ ಕಂಪನಿಯ ಸ್ವರ್ಣ ಮಹೋತ್ಸವದ ಬೆಂಗಳೂರು ಶಾಖೆಯ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ಆರೋಗ್ಯ ಮಂತ್ರಿ ಡಾ. ರಾಯನ್ನರು ಮೈಸೂರಿನ ಮತ್ತು ಇಲ್ಲಿ ಕೆಲಸ ಮಾಡುತ್ತಿರುವ ವಿಮಾ ಕಂಪನಿಗಳ ಇಲ್ಲಿನ ವಸತಿ ಸೌಕರ್ಯದ ಉದ್ಯಮದಲ್ಲಿ ತಮ್ಮ ನಿಧಿಯನ್ನು ತೊಡಗಿಸುವದೊಳ್ಳೆಯದೆಂದು ಸೂಚಿಸಿದರು.

ಬೆಂಗಳೂರು ನಗರದ ಹೊಸ ಕಲಾಸಿಪಾಳ್ಯ ಬಡಾವಣೆಗೆ ಶ್ರೀಮನ್ಮಹಾರಾಜರ ನಾಮಾಂಕಿತವನ್ನು ಅನುಸರಿಸಿ ಜಯಚಾಮ ರಾಜೇಂದ್ರ ಬಡಾವಣೆಯೆಂದು ಹೆಸರಿಡಲು ಬೆಂಗಳೂರು ನಗರಸಭೆ ನಿರ್ಣಯಿಸಿದೆ.

ಮುಂದಿನ ಜನವರಿಯಿಂದ ತಲಾ ೫ ಗಜ ಮಿಲ್ ಮತ್ತು ೫ ಗಜ ಕೈಮಗ್ಗದ ಬಟ್ಟೆಯನ್ನು ಪೂರೈಸಲಾಗುವದೆಂದು ಮೈಸೂರು ಸರಕಾರದ ಪ್ರಕಟನೆ ಹೊರಟಿದೆ.

ಪುತ್ತೂರಿನಲ್ಲಿ ತಾ. ೨೪ ನೆ ದಿನ ಶ್ರೀ ಮೊಳಹಳ್ಳಿ ಶಿವರಾಯರ ಅಧ್ಯಕ್ಷತೆಯಲ್ಲಿ ಸೇರಿದ ಸಭೆಯಲ್ಲಿ ರಾಷ್ಟ್ರೀಯ ಸ್ವಯಂಸೇವಕ ದಲದ ಉದ್ಘಾಟನೆಯಾಯಿತು. ಜಿಲ್ಹಾ ಕಾಂಗ್ರೆಸ್ ಉಪಾಧ್ಯಕ್ಷ ಶ್ರೀ ಎಚ್. ನಾರಾಯಣರಾಯರೂ ಕಾರ್ಯದರ್ಶಿ ಶ್ರೀ ಕೆ. ಕೆ. ಶೆಟ್ಟರೂ ಭಾಷಣ ಮಾಡಿದರು.

ಬೋಳಾರ (ಮಂಗಳೂರು) ಮಂಗಳಾದೇವಿ ಗುಡಿಯ ಬಳಿ ಒಂದು ಬಾವಿಯಲ್ಲಿ ಧುಮುಕಿ ಪ್ರಾಣತ್ಯಾಗ ಮಾಡಲು ಪ್ರಯತ್ನಿಸಿದ ಒಬ್ಬನನ್ನು ಅಗ್ನಿಶಾಮಕ ದಲದವರು ರಕ್ಷಿಸಿದರು.

# ವ್ಯಾಪಾರ ಪ್ರಪಂಚ

## ಮುಂಬಯಿ ಶೇರ ಪೇಟೆ

ಅಶಾದಾಯಕ 'ರಾಜಕೀಯ ಸುದ್ದಿಯಿಂದ ಕಳೆದವಾರದ ವರದಿಯ ನಂತರ ಮುಂಬಯಿ ಪೇಟೆ ಸ್ವಲ್ಪ ಸ್ಥಿರ ಧೋರಣೆಯನ್ನು ತೋರಿಸಿದರೂ ನಿರ್ದಿಷ್ಟ ಸುದ್ದಿ ಬಾರದೆ ವ್ಯಾಪಾರಿಗಳು ವ್ಯಾಪಾರವನ್ನು ಹೆಚ್ಚಿಸುವ ಧೈರ್ಯ ಮಾಡಿಲ್ಲ. ರೇಲ್ವೆ ಬಜೆಟಿನಲ್ಲಿ ಕೊರತೆ ಬೀಳಬಹುದು. ಮತ್ತು ಕರದ ಪ್ರಮಾಣ ಹೆಚ್ಚಬಹುದೆಂದು ಮುಂತಾಗಿ ಸಂಶಯಗಳಿರುವದರಿಂದಲೂ ದೀರ್ಘ ಕ್ರಿಸ್‌ಮಸ್ ರಜಾ ದಿನಗಳು ಹತ್ತಿರವಾಗಿರುವದರಿಂದಲೂ ಮತ್ತೆ ಮಂದಿ ಧೋರಣೆ ಕಾಲಿಟ್ಟಿದೆ. ಕಳೆದವಾರದ ವರದಿಯ ನಂತರ ರೂ. ೨೮೦೦-೦-೦ ಗಳಿದ್ದ ಟಾಟಾ ಡೆಫರ್ಡ ಪಾಲು ೨೮೩೦—೦-೦ ಕ್ಕೆ ಸುಧಾರಿಸಿದರೂ ಈಗ ಇಳಿದ ೨೭೫೧—೦-೦ ಕ್ಕೆ ಬಂದಿದೆ. ಬಾಂಬೇ ಡಾಯಿಂಗ ೨೭೦೫-೦-೦ ರಿಂದ ೨೬೦೨—೮—೦ಕ್ಕೂ ೩೯೭—೦—೦ರಿಂದ ೪೦೦—೦—೦ ಕ್ಕೇರಿ ಮತ್ತೆ ೩೮೪.೦.೦ ಕ್ಕೂ ಕೋಹಿನೂರು ೯೧೦-೦-೦ರಿಂದ ೮೭೭-೦-೦ಕ್ಕೂ ಸ್ವದೇಶಿ ೭೨೩-೦.೦ ರಿಂದ ೭೨೮—೦—೦ ಕ್ಕೇರಿ ೭೦೧—೮-.೦ ಕ್ಕೂ ಗೋಕಾಕ ೩೭೯-೦.೦ ರಿಂದ ೩೬೪.೦.೦ ಕ್ಕು ಇಳಿದವು. ಸಿಂಧ್ಯಾಸ್ಟೀಮು ೪೬-೧೩-೦ ರಿಂದ ೪೮.೮-೦ ಕ್ಕು ಅಸೋಸಿಯೇಟೆಡ ಸಿಮೆಂಟ್ಸ ೨೩೪—೮—೦ರಿಂದ ೨೩೧-೪-೦ ಕ್ಕು ಸ್ಥಾನಾಂತರವಾದವು. ಬ್ಯಾಂಕುಗಳಲ್ಲಿ ಸೆಂಟ್ರಲ್ ೧೨೩-೦-೦ ರ ಸುತ್ತ ಇದ್ದುದು ೧೨೦-೪-೦ ಕ್ಕು ಇಂಪಿರಿಯಲ ಎಸ್. ಸಿ. ೨೮೦೦-೦-೦ ರಿಂದ ೨೭೨೫-೦.೦ ಕ್ಕು ರಿಝರ್ವ ೧೫೩-೮-೦ ರಿಂದ ೧೫೨-೦-೦ ಕ್ಕು ಇಳಿದವು.

ಸರಕಾರಿ ಸಾಲಪತ್ರಗಳೂ ಇಳಿಮುಖವಾದವು. ಜಿ. ಪಿ. ನೋಟು ೧೦೪-೫-೦ ರ ವರೆಗೆ ಇದ್ದವು. ೧೦೩—೧೫—೦ ಕ್ಕಿಳಿದರೆ ೧೯೪೭-೫೦ ರ ಸಾಲ ೩॥' ನದು ೧೦೧-೧೪-೦ ರಲ್ಲಿ ಯಥಾಸ್ಥಿತಿ ಇವೆ.

### ಚಿನ್ನ ಬೆಳ್ಳಿ

ಮುಂಬಯಿ ಚಿನಿವಾರಕಟ್ಟೆ ಪರಿಸ್ಥಿತಿಯನ್ನು ಪ್ರಾಂತಿಕ ಸರಕಾರ ಅಭ್ಯಸಿಸಿದ್ದು ಡಾಯರೆಕ್ಟರರೊಡನೆ ಮಾತುಕತೆ ನಡೆಸಿದ್ದಾರೆ. ಹೊರನಾಡಿನಿಂದ ಬೆಳ್ಳಿ ಬರುವ ಸುದ್ದಿಯೇ ಮೊದಲಾದ ಕಾರಣಗಳಿಂದ ಬೆಳ್ಳಿ ಈ ವಾರ ಬಹಳ ಕುಗ್ಗಿ ಹೋಗಿ ಆ ಮೇಲೆ ಅಲ್ಪ ಸ್ವಲ್ಪ ಸುಧಾರಿಸಿತು. ಕಳೆದವಾರದ ವರದಿಯ ಕಾಲದಲ್ಲಿ ೧೪೨-೦-೦ ರಲ್ಲಿದ್ದ ಬೆಳ್ಳಿ ೧೩೦—೪—೦ ರ ವರೆಗೂ ಇಳಿದು ಈಗ ೧೩೫-೦-೦ ರಲ್ಲಿದೆ. ಚಿನ್ನವಾದರೂ ಸಾಕಷ್ಟು ಇಳಿತ ಕಂಡಿತು. ಅದು ೧೦೦-೧೨-೦ ರಿಂದ ೯೬—೪-೦ ಕ್ಕೆ ಹೋಗಿ ಮತ್ತೆ ೯೯-೪.೦ ಕ್ಕೇರಿ ಪುನಃ ೯೮-೮-೦ ಕ್ಕಿಳಿಯಿತು.

### ಅರಳೆ

ಅರಳೆಯ ಪರಮಾವಧಿ ಧಾರಣೆಯನ್ನು ೫೦ ರೂಪಾಯಿ ಹೆಚ್ಚಿಸಬಹುದೆಂಬ ಸುಳ್ಳು ಸುದ್ದಿಯಿಂದ ೪೬೩-೪-೦ ರ ಸುಮಾರದಲ್ಲಿದ್ದ ಜನೇವರಿ ವಾಯಿದೆ ಅರಳೆ ೪೬೯-೦.೦ ಕ್ಕೆ ಹೋದರೂ ಮತ್ತೆ ೪೬೪-೬-೦ ಕ್ಕಿಳಿದು ೪೬೫-೨-೦ ಕ್ಕೇರಿತು. ಮಾರ್ಚ ವಾಯಿದೆ ೪೭೪-೮.೦ ಮೇ, ೪೮೨-೬-೦ ಜುಲೈ ೪೯೦-೧೦-೦ ಸೆಪ್ಟೆಂಬರ ೪೯೬-೧೦-೦ ರಲ್ಲಿವೆ.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೧೪-೦-೦ |
| ಅಗಸಿ | ೨೩-೯-೦ |
| ಅಗಸಿ ಎಣ್ಣೆ | ೧೬-೮-೦ |

### ಶಿವಮೊಗ್ಗೆ

| | |
|---|---|
| ಅಡಿಕೆ ದೇಶಾವರ ನಂ ೧ಮಣ ೧ಕ್ಕೆ | ೩೮-೪೧ |
| ,, ,, ೨ | ೩೬-೩೯ |
| ರಾಜಾ ಅಲವು | ೩೩ ೩೭ |
| ನುಲಿ | ೩೮-೩೯ |
| ಚಿಟ್ಟ ವಂತಿ | ೨೭-೨೮ |
| ಚಿಟ್ಟ | ೨೬-೨೭ |
| ಮೆಣಸು | ೨೪-೨೫ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪೦ |
| ಅರಿಷಣ ಹೇರು | ೯೭-೯೯-೮-೦ |
| ಶೇಂಗಾ ಖಂಡಿ ,, | ೭೦-೮೫ |
| ಮೆಣಸಿನಕಾಯಿ ಹೇರು ,, | ೧೨೫-೨೦೦ |
| ಮಿರ್ಜಿ ತಂಬಾಕು ಹೇರು | ೧೫೦-೨೫೦ |
| ತಂಬಾಕ ಪಂಢರಪುರಿ ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | ೨೫೦-೪೦೦ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೮೦-೨೮೫ |
| ,, | ನಂ. ೨ | ೨೭೦-೨೭೫ |
| ,, | ನಂ. ೩ | ೨೬೦-೨೬೫ |
| ಅಪ್ಲಂಡ ಹತ್ತಿ | | ೨೬೦-೨೬೫ |
| ಜಿನ | | ೨೦೦-೨೦೫ |
| ಸಾಜಿನ | | ೧೮೦-೧೯೫ |
| ಡಬಲರೋಲ | | ೧೯೦-೧೯೫ |

# ಮಂಗಳೂರಲ್ಲಿ ಶ್ರೀ ಗಿರಿಯವರು

## ಸಮತಾವಾದವೇ ನಿಸ್ತಾರ ಮಾರ್ಗ

ಈ ಕೆಲದಿನಗಳಿಂದ ದಕ್ಷಿಣ ಕನ್ನಡ ಜಿಲ್ಲೆಗೆ ಸಂದರ್ಶನವಿತ್ತ ಮದ್ರಾಸ ಮಂತ್ರಿಗಳಲ್ಲಿ ಮಾನ್ಯ ಶ್ರೀ ವಿ. ವಿ. ಗಿರಿಯವರು ನಾಲ್ಕನೆಯವರು. ಅವರು ನವಂಬರ ೨೬ ಕ್ಕೆ ಮಂಗಳೂರಿಗೆ ಚಿತ್ತೈಸಿ ತಾ ೨೭ ಕ್ಕೆ ಸಾರ್ವಜನಿಕರ ಸಭೆಯಲ್ಲಿ ಭಾಷಣ ಮಾಡಿದ್ದಲ್ಲದೆ ಅನೇಕ ಸಂಘ ಸಂಸ್ಥೆಗಳಿಗೆ ದರ್ಶನವಿತ್ತರು. ಅವರು ಕೂಲಿಕಾರರ ಮತ್ತು ಒಡೆಯರ ಪ್ರತಿನಿಧಿಗಳನ್ನು ಪ್ರತ್ಯೇಕವಾಗಿ ಕಂಡು ವಿಚಾರ ವಿನಿಮಯ ಮಾಡಿದೊಂದು ವೈಶಿಷ್ಟ್ಯ. ಕೂಲಿಕಾರ ಪ್ರತಿನಿಧಿಗಳ ಸಭೆಯಲ್ಲಿ ಶ್ರೀ ಕೆ.ಕೆ. ಶೆಟ್ಟರು ಹಾಗು ಶ್ರೀ ಹೊಳ್ಳ ಮತ್ತು ಶಾಂತಾರಾಮ ಪೈಯವರು ಕೂಲಿಕಾರರ ಸ್ಥಿತಿಗತಿಗಳನ್ನು ಮಂತ್ರಿಗಳಿಗೆ ಬಿನ್ನವಿಸಿಕೊಂಡಿದ್ದರು. ಮಂತ್ರಿಗಳು ಕೂಲಿಕಾರರನ್ನು ಕೇವಲ ಟ್ರೇಡ ಯೂನಿಯನ್ ತತ್ವಗಳಿಗನುಸಾರವಾಗಿ ಸಂಘಟಿಸಬೇಕಲ್ಲದೆ ರಾಜಕೀಯ ಜಂಜಾಟದಲ್ಲಿ ಅವರನ್ನು ಸಿಲುಕಿಸಬಾರದೆಂದು ಉಪದೇಶಿಸಿದ್ದಲ್ಲದೆ ಕೂಲಿಕಾರರ ಹಿತಕ್ಕಾಗಿ ಕೇಂದ್ರ ಸರಕಾರದವರು ೪ ಕಾಯಿದೆಗಳನ್ನೂ ಪ್ರಾಂತಿಕ ಸರಕಾರ ಮತ್ತೆರಡು ಕಾಯಿದೆಗಳನ್ನೂ ಶೀಘ್ರದಲ್ಲಿಯೇ ತರುವವರಿದ್ದಾರೆಂದು ಹೇಳಿದರು. ಕಮ್ಯುನಿಷ್ಟ ಪದ್ಧತಿಯ ಕೂಲಿಕಾರ ಸಂಘಟನೆಯನ್ನು ಅಹಿತಕರವೆಂದು ಸಾರಿದರು. ಒಡೆಯರ ಸಭೆಯಲ್ಲಿ ಸಿ. ಪಿ. ಪಿ. ಕಂಪನಿಯ ಶ್ರೀ ವಿ ಎಸ್ ಕುಡ್ವರು ಕೂಲಿಕಾರ ಸಂಘಟನೆಯಲ್ಲಿ ರಾಜಕೀಯ ಪಂಗಡಗಳು ತಲೆದೋರಿರುವದರಿಂದ ಒದಗಿದ ಅನಾಹುತಗಳನ್ನು ತಿಳಿಹೇಳಿದರು. ಮತ್ತು ಕೂಲಿಕಾರರ ಸುಖಕ್ಕಾಗಿ ತಮಗೆ ತೋಚಿದ ಕೆಲ ಸೂಚನೆಗಳನ್ನು ಮಾಡಿದರು. ಮುಖ್ಯ ಮಂತ್ರಿಗಳು ಎಲ್ಲರ ಹಿತ ಸಾಧಿಸುವ ದೃಷ್ಟಿಯಿಂದ ಸರಕಾರ ಯೋಗ್ಯ ಕ್ರಮ ಕೈಕೊಳ್ಳುವದೆಂದು ತಿಳಿಸಿದರು.

ಸಾರ್ವಜನಿಕ ಸಭೆಯಲ್ಲಿ ಮಾನ್ಯ ಗಿರಿಯವರು ಸ್ವತಂತ್ರ ಹಿಂದುಸ್ತಾನದ ಚಿತ್ರವನ್ನು ರೇಖಿಸುತ್ತಾ ಕಾಂಗ್ರೆಸ್ಸು ಅಧಿಕಾರಕ್ಕೆ ಬಂದಿದೆಯೆಂದ ಮಾತ್ರಕ್ಕೆ ಸ್ವರಾಜ್ಯ ಬಂತೆಂದು ಯಾರೂ ತಿಳಿಯಬಾರದೆಂದೆಚ್ಚರಿಸಿ, ತೊಟ್ಟಿಲಿಂದ ಚಿತೆಯವರೆಗೆ ಜನತೆಯ ಯೋಗಕ್ಷೇಮವನ್ನು ನೋಡಿಕೊಳ್ಳುವ ಸಮತಾವಾದಿ ಪ್ರಭುತ್ವ ಸ್ಥಾಪಿಸುವಾಗಲೇ ನಿಜ ಸ್ವರಾಜ್ಯ ಬಂದಂತಾಯಿತೆಂದೂ ಆ ಅದರ್ಶಕ್ಕಾಗಿ ಎಲ್ಲರೂ ಹೆಣಗಬೇಕೆಂದೂ ಸಾರಿದರು. ತಾ ೨೭ ಕ್ಕೆ ಅವರು ಜಿಲ್ಲೆಯಿಂದ ಮರಳಿದರು.

ಮಂಗಳೂರ ಬೀಡಿ ಒಡೆಯ- ಕೂಲಿಕಾರರ ನಡುವಣ ವಿವಾದವನ್ನು ಬಗೆಹರಿಸಲು ಶ್ರೀ ಗಿರಿಯವರೊಡನೆ ಬಂದಿದ್ದ ಕೇರಳ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಕೇಳಪ್ಪನವರು ಉಭಯತರಲ್ಲಿ ಒಪ್ಪಂದ ಮಾಡಿಸಲು ಸಾಧ್ಯವಾಗದೆ ಮರಳಿದರೆಂದೂ ಈ ಬಗ್ಗೆ ಶ್ರೀ ಗಿರಿಯವರು ಒಬ್ಬ ಸರಕಾರಿ ಮಧ್ಯಸ್ಥನನ್ನು ಕಳಿಸ ಬಹುದೆಂದೂ ತಿಳಿಯುತ್ತದೆ

## ದಕ್ಷಿಣ ಕನ್ನಡ

ಧರ್ಮಸ್ಥಳದಲ್ಲಿ ತಾ. ೧೯ ರಿಂದ ೨೩ ರ ವರೆಗೆ ನಡೆದ ದೀಪೋತ್ಸವ ಕಾಲದಲ್ಲಿ ಸರ್ವ ಧರ್ಮಗಳಲ್ಲಿ ಸೌಹಾರ್ದ ಸ್ಥಾಪಿಸುವ ಉದ್ದೇಶದಿಂದ ಅನೇಕ ವರ್ಷಗಳಿಂದ ಜರಗಿಸಲ್ಪಡುವ ಸರ್ವಧರ್ಮ ಸಮ್ಮೇಲನ ಜರಗಿತು. ಬೆಂಗಳೂರಿನ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಧರಣೀಂದ್ರಯ್ಯ, ಅಸ್ಥಾನ ವಿದ್ವಾನ್ ಶ್ರೀ ಕೆ ನಂಜುಂಡಾರಾಧ್ಯ, ವಿದ್ವಾನ್ ಶ್ರೀ ವಿ. ರಾಘವಾಚಾರ್ಯ, ಶ್ರೀ ಪಟ್ಟಾಭಿ ಜೋಯಿಸ, ಶ್ರೀ ಮಾಧವಾಚಾರ್ಯ, ಮೌಲ್ವಿ ಕಾಸಿಂ ಸಾಹೇಬ, ಶ್ರೀ ಜೆ. ಸ್ವಾಮಿದಾಸ, ಶ್ರೀ ನಾರಾಯಣ ಕಿಲ್ಲೆ, ಪಂಡಿತ ರತ್ನಂ ಶಾಂತಿರಾಜ ಶಾಸ್ತ್ರಿ, ಮೈಸೂರು ಪ್ರಜಾಪ್ರತಿನಿಧಿ ಸಭಾ ಸದಸ್ಯ ಶ್ರೀ ಎ. ಜೆ. ಖಲೀಲ, ಮೊದಲಾದವರು ವಿವಿಧ ಧರ್ಮಗಳ ತತ್ವಗಳನ್ನು ಕುರಿತು ಭಾಷಣ ಮಾಡಿದರು.

# ೯ ನೇ ದಿನಾಂಕ ಘಟನಾ ಸಮಿತಿ ಪ್ರಾರಂಭ

## ಡಾ. ಸಚ್ಚಿದಾನಂದ ಸಿಂಹರ ಅಧ್ಯಕ್ಷತೆ

ಡಿಸೆಂಬರ ೯ ನೇ ತಾರೀಕು ಹಿಂದುಸ್ತಾನದ ಇತಿಹಾಸದಲ್ಲಿ ಮಹತ್ವದ ದಿನವಾಗಿ ಪರಿಣಮಿಸಲಿರುವದು. ಹಿಂದುಸ್ತಾನದ ರಾಜ್ಯಘಟನೆಯನ್ನು ಸಿದ್ಧಪಡಿಸಲು ಸ್ಥಾಪಿತವಾದ ಘಟನಾ ಸಮಿತಿಯ ಪ್ರಾಸ್ತಾವಿಕ ಸಭೆ ದಿಲ್ಲಿಯಲ್ಲಿ ಕೇಂದ್ರ ವಿಧಿಮಂಡಲಗಳ ವಾಚನಾಲಯದಲ್ಲಿ ಪ್ರಾರಂಭವಾಗುವುದು. ಈ ಸಮಿತಿಗೆ ಮುಸ್ಲಿಂ ಲೀಗಿನವರು ಸದ್ಯಕ್ಕೆ ಬಹಿಷ್ಕಾರ ಹಾಕಿದ್ದರೂ ಅವರೂ ಸಮಿತಿಯ ಕಾರ್ಯಕಲಾಪಗಳಲ್ಲಿ ಭಾಗವಹಿಸುವಂತೆ ಲಂಡನಿನಲ್ಲಿದೀಗ ಪರಿಷತ್ತು ನಡೆದಿದೆ. ಲಂಡನಿಗೆ ಹೋದ ಧುರೀಣರು ಘಟನಾ ಸಮಿತಿಯ ಹೊತ್ತಿಗೆ ಮರಳಿ ಬರುವರೆಂದು ಹೇಳಲಾಗುತ್ತದೆ. ಆಕಸ್ಮಿಕ ಕಾರಣಗಳ ಮೂಲಕ ಅವರಿಗೆ ಬರುವದಾಗದಿದ್ದರೆ ಘಟನಾ ಸಮಿತಿ ಗೊತ್ತುಪಡಿಸಿದ ಸಮಯಕ್ಕೆ ಕೂಡೇ ತೀರುವದೆಂದು ತೋರುತ್ತದೆ. ಆ ದೃಷ್ಟಿಯಿಂದಲೆ ಈಗ ಸಿದ್ಧತೆಗಳು ಭರದಿಂದ ನಡೆದಿವೆ. ಕಾಂಗ್ರೆಸ್ ತಜ್ಞ ಸಮಿತಿಯವರು ಈಗಾಗಲೆ ಸಭೆಯ ಕಾರ್ಯಪದ್ಧತಿಯನ್ನು ಗೊತ್ತುಪಡಿಸುತಿರುವರು. ಸದಸ್ಯರೂ ತಮ್ಮ ತಮ್ಮ ಸ್ಥಳಗಳಿಂದ ಈಗಾಗಲೆ ಹೊರಟಿರುವರು.

### ಘಟನಾ ಸಮಿತಿಯ ಸ್ವರೂಪ

ಸಂಸ್ಥಾನಗಳ ಪ್ರತಿನಿಧಿಗಳನ್ನು ಬಿಟ್ಟು ಈ ಸಮಿತಿಯಲ್ಲಿ ೨೯೬ ಪ್ರತಿನಿಧಿಗಳು ಇದರಲ್ಲಿರುವರು. ಅವರಲ್ಲಿ ೮೦ ಜನ ಮುಸಲ್ಮಾನರಿದ್ದು ೭೫ ಜನ ಲೀಗಿನವರಿರುವರು. 'ಅ' ಗುಂಪಿನಲ್ಲಿಯ ೩೧ ಮುಸಲ್ಮಾನ ಪ್ರತಿನಿಧಿಗಳಲ್ಲಿ ಶ್ರೀ ಅಸಫಅಲ್ಲಿ ಮತ್ತು ರಫಿಅಹಮ್ಮದ ಕಿಡ್ವಾಯಿ ಇವರನ್ನು ಬಿಟ್ಟು ಉಳಿದವರೆಲ್ಲ ಮುಸ್ಲಿಂಲೀಗಿನವರು. ಬ ಗುಂಪಿನಲ್ಲಿ ಮೌ. ಅಬುಲ್ ಕಲಂ ಅಝಾದ, ಖಾನ ಅಬ್ದುಲ್ ಗಫರಖಾನ ಇಬ್ಬರು ಕಾಂಗ್ರೆಸ್‌ಮುಸಲ್ಮಾನರು. ಮತ್ತು ಸರ್ ಮುಕರಾತ ಅಲ್ಲಿ ಎಂಬ ಯೂನಿಯನ್ ಪಕ್ಷದವರನ್ನು ಬಿಟ್ಟು ಉಳಿದ ೧೯ ಜನ ಲೀಗಿನವರಿದ್ದು ಒಬ್ಬರು ಬಲುಚಿಸ್ತಾನದಿಂದ ಆರಿಸಿ ಬಂದಿರುವರು. ಇವರು ಲೀಗಿನವರಾಗಿರದಿದ್ದರೂ ಲೀಗಿಗೆ ಬೆಂಬಲ ಕೊಡುವದಾಗಿ ಹೇಳಿದ್ದಾರೆ. 'ಕ' ಗುಂಪಿನಲ್ಲಿಯ ೩೬ ಮುಸಲ್ಮಾನ ಸದಸ್ಯರೆಲ್ಲ ಲೀಗಿನವರೇ ಇದ್ದಾರೆ. ಉಳಿದ ಸದಸ್ಯರಲ್ಲಿ ೧೬೩ ಹಿಂದುಗಳು ೩೧ ಹರಿಜನರು ನಾಲ್ವರು ಶೀಖರು ಮೂವರು ಆಂಗ್ಲೊ ಇಂಡಿಯನ್‌ರು, ಆರು ಜನ ಹಿಂದೀ ಕ್ರಿಶ್ಚಿಯನ್‌ರು, ಮೂವರು ಪಾರ್ಸಿಗಳು, ಆರು ಜನ ಮೂಲನಿವಾಸಿಗಳ ಪ್ರತಿನಿಧಿಗಳು. ೧೫ ಸ್ತ್ರೀ ಪ್ರತಿನಿಧಿಗಳು ಇರುವರು. ಬಿಹಾರದ ೭೫ ವರುಷದ ಡಾ: ಸಚ್ಚಿದಾನಂದ ಸಿಂಹರು ತಾತ್ಪೂರ್ತಿಕ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದು ಅವರು ೯ ನೇ ತಾರೀಕಿನ ಕಾರ್ಯಕಲಾಪಗಳನ್ನು ಪ್ರಾರಂಭಿಸುವರು.

ಸುಮಾರು ೩೫೦ ಪ್ರೇಕ್ಷಕರಿಗೆ ಸಾಲುವಷ್ಟು ಸ್ಥಳದ ವ್ಯವಸ್ಥೆ ಮಾಡಲಾಗಿದೆ. ಸುದ್ದಿಗಾರರಿಗಾಗಿ ಪ್ರತ್ಯೇಕ ಸ್ಥಳವನ್ನೇರ್ಪಡಿಸಲಾಗಿದೆ. ಪ್ರಾರ್ಥನೆಯೊಂದಿಗೆ ಘಟನಾ ಸಮಿತಿಯ ಕಾರ್ಯ ಪ್ರಾರಂಭವಾಗುವದೆಂದು ಸುದ್ದಿ.

### ಕಾರ್ಯಕಲಾಪ ನಡೆವುದೆಂತು ?

ಡಾ. ಸಚ್ಚಿದಾನಂದ ಸಿಂಹರು ಯಾವದೇ ಬಗೆಯ ಔಪಚಾರಿಕ ಸೂಚನೆ ಬೆಂಬಲವಿಲ್ಲದೆ ನೀರವವಾಗಿ ಅಧ್ಯಕ್ಷಸ್ಥಾನವನ್ನುಸ್ವೀಕರಿಸಿ ಕಾರ್ಯಕಲಾಪಗಳನ್ನು ಪ್ರಾರಂಭಿಸುವರು. ಸದಸ್ಯರು ಆಯಾ ಪಕ್ಷಗಳ ಪ್ರಕಾರ ಕೂಡದೆ ಪ್ರಾಂತಗಳನ್ವಯ ಕೂಡಬೇಕೆಂದು ಸರ್ವಸಾಧಾರಣವಾಗಿ ನಿಶ್ಚಿತವಾಗಿದೆ. ಪ್ರಾರಂಭದಲ್ಲಿ ಸದಸ್ಯರೆಲ್ಲರ ಸಹಿ ತೆಗೆದುಕೊಳ್ಳಲಾಗುವದು. ಪ್ರತಿಜ್ಞೆಯನ್ನು ತೆಗೆದುಕೊಳ್ಳುವ ಅವಶ್ಯಕತೆಯೇನೂ ಇಲ್ಲ. ಆಯಾ ಪ್ರಾಂತಿಕ ಶಾಸನ ಸಭೆಯ ಅಧ್ಯಕ್ಷರಿಂದ ಸದಸ್ಯರು ಲೇಖ ಮೂಲಕ ಪ್ರಶಸ್ತಿ ಪತ್ರಿಕೆಯನ್ನು ತಂದಿರಬೇಕು. ತಾತ್ಪೂರ್ತಿಕ ಅಧ್ಯಕ್ಷರು ಚಿಕ್ಕದೊಂದು ಭಾಷಣ ಮಾಡಿ ಸದಸ್ಯರನ್ನು ಸ್ವಾಗತಿಸುವರು. ಅನಂತರ ನಿಯಮ ನಿಬಂಧನೆಗಳನ್ನು ಗೊತ್ತುಪಡಿಸುವದಕ್ಕೆ ಸಮಿತಿಯೊಂದು ಸ್ಥಾಪಿತವಾಗುವದು. ಅದೇ ರೀತಿ ಶಿಬ್ಬಂದಿ ಸಮಿತಿ ಮತ್ತು ನಿರ್ವಾಹಕ ಸಮಿತಿಗಳು ಸ್ಥಾಪಿತವಾಗುವವು. ಅಧ್ಯಕ್ಷ ಉಪಾಧ್ಯಕ್ಷರ ಆಯ್ಕೆಯ ನಿಯಮಗಳು ಮತ್ತು ತಾರೀಕು ಗೊತ್ತುಪಡಿಸಲಾಗುವದು. ಸದಸ್ಯರು ಸಹಿ ಮಾಡಿದ ಬಳಿಕ ನಿಯಮ ಸಮಿತಿಯ ವರದಿಯ ವಿಚಾರಣೆ ನಡೆಯುವದು. ಅಧ್ಯಕ್ಷ ಉಪಾಧ್ಯಕ್ಷರ ಆಯ್ಕೆ ನಂತರ ಅಧ್ಯಕ್ಷರಿಗೆ ನಿಯಮಗಳ ಅರ್ಥ ವಿವರಣೆಯಲ್ಲಿ ಸಹಾಯ ಮಾಡಲು ಒಂದು ಸಲಹೆ ಸಮಿತಿಯನ್ನು ಆರಿಸಲಾಗುವದು. ನಾಗರಿಕ ಅಲ್ಪಸಂಖ್ಯಾಕರ, ಗುಡ್ಡಗಾಡು ಜನರ ಮತ್ತು ಪ್ರತ್ಯೇಕೀಕೃತ ಪ್ರದೇಶದಲ್ಲಿಯ ಜನರ ಹಕ್ಕುಬಾಧ್ಯತೆಗಳ ಸಂಬಂಧದಲ್ಲಿ ಮುಖ್ಯ ಸಲಹೆ ಸಮಿತಿಗಳ ಆಯ್ಕೆಯಾಗುವದು.

ಘಟನಾ ಸಮಿತಿಯ ಉದ್ದೇಶವನ್ನು ಸಾರುವ ಗೊತ್ತುವಳಿಯೊಂದನ್ನು ಬಹಿರಂಗ ಅಧಿವೇಶನದಲ್ಲಿ ಮಂಡಿಸಬೇಕೆಂಬ ವಿಚಾರವಿದೆ. ಹಿಂದುಸ್ತಾನ ಸರ್ವತಂತ್ರ ಸ್ವತಂತ್ರ ರಾಷ್ಟ್ರವೆಂಬುದಾಗಿ ಮಿರತ ಕಾಂಗ್ರೆಸ್ಸಿನಲ್ಲಿ ಸ್ವೀಕೃತವಾದ ಗೊತ್ತುವಳಿಯಂತೇ ಇದು ಇರುವದೆಂದು ಹೇಳಲಾಗುತ್ತದೆ. ಸದ್ಯಕ್ಕೆ ಗೊತ್ತಾದ ಮೇರೆಗೆ ಈ ಸಮಿತಿ ಜಾನೇವಾರಿ ೩ ನೇ ವಾರದ ವರೆಗೆ ನಡೆಯುವದು. ಕ್ರಿಸಮುಸ್‌ದಲ್ಲಿ ನಡುವೆ ಬಿಡುವು ಕೊಡಲಾಗುವದು. ಈ ಪ್ರಾಸ್ತಾವಿಕ ಸಭೆ ಸದ್ಯಕ್ಕೆ ಮುಂದುವರಿದರೂ ಸಮಿತಿಗಳ ಕಾರ್ಯ ಹಾಗೆಯೆ ಸಾಗುವದು.

## ಗಿರಣಿ ಕೂಲಿಕಾರರಿಗೆ - ಸರದಾರರ ಸದುಪದೇಶ

ಇಂದು ಬ್ರಿಟನ್‌ದಲ್ಲಿಯ ಕೂಲಿಕಾರ ಪಕ್ಷ ಸಂಘಟಿತವಾಗಿ ಅಧಿಕಾರ ವಹಿಸಿ ಬ್ರಿಟಿಶ್ ಸರಕಾರದ ರಾಜ್ಯಸೂತ್ರಗಳನ್ನು ವಹಿಸಿ ಆಡಳಿತೆ ಸಾಗಿಸಿದೆ. ನೀವಾದರೂ ರಾಷ್ಟ್ರದ ಭವಿತವ್ಯವನ್ನು ನಿರ್ಣಯಿಸುವ ಹೊಣೆ ಅರಿತು ಸಂಘಟಿತರಾಗಿ ಹಿಂದುಸ್ತಾನದ ರಾಜ್ಯಸೂತ್ರಗಳನ್ನು ವಹಿಸಲು ಶಕ್ತರಾಗಬೇಕು ಎಂದು ವಲ್ಲಭಭಾಯಿ ಪಟೇಲರು ಮುಂಬಯಿಯಲ್ಲಿ ೩ ನೇ ತಾ. ಕೂಡಿದ ಹಿಂದುಸ್ತಾನ ಮಜದೂರ ಸೇವಕ ಸಂಘದ ಕಾರ್ಯಕರ್ತರ ಸಭೆಯಲ್ಲಿ ಹೇಳಿದರು. ಅನಂತರ ಸರದಾರರು ಕಮ್ಯುನಿಸ್ಟ ಪಕ್ಷದ ಚಟುವಟಿಕೆಗಳನ್ನು ಟೀಕಿಸುತ್ತ ಈ ಪಕ್ಷವು ಯಾವಾಗಲೂ ಕಾಂಗ್ರೆಸ್ಸು ತೋರಿಸಿದ ಮಾರ್ಗದ ವಿರುದ್ಧವಾದ ಮಾರ್ಗವನ್ನೇ ಕೂಲಿಕಾರರಿಗೆ ಬೋಧಿಸಿ ಕೂಲಿಕಾರರ ಬುದ್ಧಿಭ್ರಂಶವಾಗುವಂತೆ ಮಾಡುತ್ತಾರ. ೧೯೪೨ ರಲ್ಲಿ ಕಾಂಗ್ರೆಸ್ಸು ಬ್ರಿಟಿಶರೆ ಹಿಂದುಸ್ತಾನದಿಂದ ತೊಲಗಿರಿ ಎಂದು ಸಾರಿದಾಗ ಕಮ್ಯುನಿಷ್ಟರು ಜನತಾ ಯುದ್ಧ ಎಂಬ ಹೂಲಿಯನ್ನೆಬ್ಬಿಸಿ ಯುದ್ಧ ಸಮಯದಲ್ಲಿ ಬ್ರಿಟಿಶರೊಡನೆ ಸಹಕರಿಸಲು ಬೋಧಿಸಿದರು. ಆದರೆ ಈಗ ಬ್ರಿಟಿಶರು ಹಿಂದುಸ್ತಾನ ಬಿಟ್ಟು ಹೋಗುವ ನಿರ್ಧಾರ ಮಾಡಿ ಅದರ ಸಿದ್ಧತೆ ನಡೆಸಿದಾಗ ಈ ಕಮ್ಯೂನಿಸ್ಟ ವೀರರು ಬ್ರಿಟಿಶರೊಡನೆ ಹೋರಾಟ ಹೂಡಬೇಕೆಂದು ಹುರಿದುಂಬಿಸಹತ್ತಿರುವರು. ರಶಿಯಾ ದೇಶದಿಂದ ಮಾರ್ಗದರ್ಶನ ಪಡೆವ ಈ ಕಮ್ಯೂನಿಷ್ಟ ಪಕ್ಷದವರು ತಮ್ಮ ಗುರಿಯನ್ನು ಸಾಧಿಸಲು ಜನತೆಗೆ ಹಿಂಸೆ ಸಂಪು ಉದ್ಯೋಗಗಳನ್ನು ಅಸ್ತ್ರವ್ಯಸ್ತ ಮಾಡುವ ಉಪದೇಶ ಮಾಡುವರು ಆದರೆ ಈ ಸಂಪುಗಳಿಂದ ಕೆಲಸಗಾರರಿಗೆ ಆದ ಲಾಭವೇನು?

ಕೂಲಿಕಾರರು ಸಂಘಟಿತರಾಗಿ ಒಂದು ಸಂಘದ ವಿಧೇಯ ಸದಸ್ಯರಾಗಿದರೆ ಅವರ ನ್ಯಾಯವಾದ ಬೇಡಿಕೆಗಳನ್ನು ಯಾರೂ ಅಲ್ಲಗಳೆಯಲಾರರು. ಸಂಪಿನ ಬ್ರಹ್ಮಾಸ್ತ್ರವನ್ನು ಕ್ಷುಲ್ಲಕ ಕಾರಣಗಳಿಗಾಗಿ ಉಪಯೋಗಿಸಕೂಡದು ಪಂಚಾಯತಿಯ ನಿರ್ಣಯ ಔದ್ಯೋಗಿಕ ಕಲಹ ವಿಚಾರಣೆ ನ್ಯಾಯಾಲಯ ಈ ಎಲ್ಲ ಮಾರ್ಗಗಳನ್ನು ಮೊದಲು ಉಪಯೋಗಿಸಿ ನೋಡುವದು ಒಳ್ಳೇದೆಂದೂ ಸರದಾರರು ಹೇಳಿದರು.









ಚಿಕ್ಕ ಕತೆ

# ಮಂಜು-ಸುಧಾ


ಬರೆದವರು:
ಶ್ರೀ ನಮಿರಾಜ ಮಲ್ಲ


"ನೀನೆಲ್ಲಿಯವಳು ? ನಿನ್ನ ಹೆಸರೇನು ?"

"............"

"ಹೇಳಲಾರೆಯಾ ?...."

"ನಾನು ಇಲ್ಲಿಯವಳೆ..."

"ನಿನ್ನ ಹೆಸರು ?"

"ಸುಧಾ."

"ಸುಧಾ !" ಎನ್ನುತ್ತ ನಾನು ಮೂಗಿನ ತುದಿಯಲ್ಲಿ ಬೆರಳನ್ನಿಟ್ಟೆ.

ಎಷ್ಟು ಚೆಲುವಾದ ಹೆಸರು ! ಎಷ್ಟು ಅನುವಾದ ರೂಪ ! ಈ ಸುಧಾ ಯಾವ ಕ್ಷುಧೆಯನ್ನು ಪರಿಹರಿಸಬಹುದು !

ಬಹಿರಂಗ ಸೌಂದರ್ಯವು ಸುಧೆಯನ್ನು ನನ್ನ ಕಣ್ಣಿನ ಮಣಿಯನ್ನಾಗಿ ಮಾಡಿತು. ಅವಳು ತಲೆವಾಗಿ ಮೆಲ್ಲನೆ ಅತ್ತ ಸರಿಯಹತ್ತಿದಳು....

... ಅಷ್ಟರಲ್ಲಿ ಒಳಗಿನ ಬಾಗಿಲು ಧಡಾರನೆ ತೆಗೆಯಲ್ಪಟ್ಟಿತು. ನನ್ನಕ್ಕ ಹೊರಗೆ ತಲೆಹಾಕಿ "ಮಂಜೂ !...ಮಂಜೂ ! ಹ್ಹ ! ಗಂಡಸಿನೊಡನೆ ಹೇಗೆ ನಾಚಿಕೆಯಿಲ್ಲದೆ ಮಾತನಾಡುತ್ತಿರುವಳು ! ತನಗೆ ಪ್ರಾಯ ಬಂದಿದೆ, ಯಾರಾದರೂ ಏನಾದರೂ ಹೇಳಿಯಾರು ಎಂಬ ಯಾವ ಗೊಡವೆಯೂ ಇವಳಿಗಿಲ್ಲ ! ಅಬ್ಬಬ್ಬಾ ಹೆಂಗಸೇ !..." ಎಂದು ಸ್ಫೋಟಗೊಳ್ಳುತ್ತಿದ್ದಂತೆಯೇ ಸುಧಾ ತನ್ನ ತನುವಲ್ಲರಿಯನ್ನು ಅತ್ತಿತ್ತ ಬಾಗಿಸುತ್ತ ಮಾಯವಾದಳು.

ಮತ್ತೆ ನನಗೆ ಅವಳು ತುಸು ಹೊತ್ತು ಕಾಣಸಿಗಲಿಲ್ಲ—ಅವಳ ಕುರಿತು ಪೂರ್ಣ ತಿಳಕೊಳ್ಳಬೇಕೆಂಬ ಜಿಜ್ಞಾಸೆ ನನ್ನಲ್ಲಿ ಬಲವಾಗಿ ಮೂಡಿತು. ಅಕ್ಕನ ಬಳಿಗೆ ಹೋಗಿ ಅವಳು ಯಾರು ಎಂದು ವಿಚಾರಿಸಿದೆ.

"ನಿನಗದೆಲ್ಲ ಯಾಕೋ ?......ಅ ! ಹ್ಹಾ ! ನಿನಗೂ ಅವಳು ಮಂಕುಬೂದಿ ಎರಚಿದಳೇ ?" ಎಂದು ಹುಬ್ಬುಗಂಟಿಕ್ಕಿ ಕೈಯ್ಯಲ್ಲಿದ್ದ ಪಾತ್ರೆಯನ್ನು ಕೆಳಗೆ ಬಿಸಾಡುತ್ತ ಅಕ್ಕ ಕೇಳಿದಳು.

"......ಅಲ್ಲಕ್ಕ...ನನ್ನ ಮೇಲೆ ನಿನಗೇನು ಸಂಶಯ ? ನನಗೆ ಅವಳು ಯಾರೆಂದು ತಿಳಿದುಕೊಳ್ಳಬೇಕಾಗಿದೆ ಅಷ್ಟೆ. ನಾನೇನಾದರೂ ನಿನ್ನ ಕೆಲಸದ ಜನವನ್ನು ತಪ್ಪಿಸಿಕೊಂಡು ಹೋಗುವ ಆಲೋಚನೆಯಲ್ಲಿರುವೆನೆಂದು ನೀನು ಎಣಿಸಬೇಡ..." ಎಂದು ಸಂಕೋಚಗೊಂಡ ನಿರ್ಧಾರ ಧ್ವನಿಯಿಂದ ಪ್ರತಿಭಟಿಸಿದೆ.

ಅಕ್ಕನಿಗೆ ನನ್ನ ಈ ಪ್ರತಿಭಟನೆಯನ್ನು ನೋಡಿ ತನ್ನ ಬಿರುಸಾಟಕ್ಕೆ ತನ್ನಲ್ಲೇ ತುಸು ಬೇಸರವಾಗಿರಬಹುಹು. ತುಸು ಹೊತ್ತುಕಳೆದ ಬಳಿಕ ಅದನ್ನು ಮಾತಿನಲ್ಲೇ ವ್ಯಕ್ತಪಡಿಸಿದಳು. ಮತ್ತೆ ಮುಂದುವರಿಸುತ್ತ "ಅವಳು ಇಲ್ಲಿ ದೂಮಣ್ಣನಿದ್ದನಲ್ಲ ?-ಅವನ ಮಗಳು. ದೂಮಣ್ಣನೂ ಅವನ ಹೆಂಡತಿಯೂ ಏಳೆಂಟು ವರ್ಷಗಳ ಹಿಂದೆ ತೀರಿ ಹೋದರು. ಆ ಮೇಲೆ ಈ ಹೆಣ್ಣು ನಮ್ಮಲ್ಲೇ ಕೆಲಸಕ್ಕೆ ನಿಂತಿದೆ" ಎಂದಳು.

"ಅದಿರಲಿ ಅಕ್ಕಾ. ಅವಳ ಹೆಸರು ಸುಧಾ ಎಂದೇ ? ಮಂಜೂ ಎಂದೇ ?" ಎಂದು ಒತ್ತಿ ಪ್ರಶ್ನಿಸಿದೆ.

"ಸುಧಾ !...ಹ್ಹ ! ಈ ತೊತ್ತಿಗೆ ಅಂಥ ಹೆಸರೇ ? ಅದು ಮೃತಪಟ್ಟ ನಿನ್ನ ಸೊಸೆಯ ಹೆಸರು. ಆ ನನ್ನ ಸುಧಾ ನೋಡು ಎಷ್ಟು ಚೆಲುವಿದ್ದಳು ! ಎಂಥ ಗುಣವವಳದು ! ಹಾಯ್ ! ಅವಳ ನೆನಪಾದೊಡನೆ ನನ್ನ ಮೇಲೆ 'ಗುಜುಗುಜು' ಎನ್ನುತ್ತಿರುವ ಎಣ್ಣೆಯನ್ನು ಒಲೆಯಿಂದ ತೆಗೆದು ಹೊಯ್ದ ಹಾಗೆ ಭಾಸವಾಗುತ್ತದೆ ! ......ಅವಳ ಹೆತ್ತತಾಯಿ ಹಾಗೆ ಹೆಸರಿಟ್ಟಿರಬಹುದು. ಈಗ ಒಡತಿಯಾಗಿರುವ ನಾನು ಹೀಗೆ ಕರೆಯುವೆನು" "ಎನ್ನುತ್ತ ತನ್ನ ಸ್ವರ್ಗಸ್ಥ ಮಗುವಿಗಾಗಿ ಶ್ರದ್ಧಾಶ್ರುಗಳನ್ನು ಸುರಿಸಿದಳು.

ನನ್ನ ಮೇಲೂ ಅವಳ ದುಃಖವು ಪರಿಣಾಮಕಾರಿಯಾಯಿತು—ಆದರೆ ತುಸು ಕಡಿಮೆ ಪರಿಮಾಣದಲ್ಲಿ. ಗಂಡಸೊಬ್ಬನು ಎಷ್ಟು ಶ್ರದ್ಧೆಯಿಂದ ಮತ್ತು ಯಥಾರ್ಥತೆಯಿಂದ ತನ್ನ ದುಃಖವನ್ನು ವ್ಯಕ್ತಪಡಿಸಿದರೂ ಹೆಂಗಸಿನ ಮಮತಾಪೂರ್ಣ ದುಃಖದ ಅರ್ಧಪಾಲಿನಷ್ಟೂ ಅದು ಆಗಲಾರದು; ಏಕೆಂದರೆ ಹೆಂಗಸರ ಕರ್ತವ್ಯವೇ ಅದು ಆಗಿಹೋಗಿದೆ; ಅವರು ದಯೆ ಮತ್ತು ಸಹಾನುಭೂತಿಗಳ ಕೀರ್ತಿಗೊಂಡ ಮೂರ್ತಿಗಳು ! ಅವರ ಕಣ್ಣೀರಿಗೆ ಗಂಡಸರ ಹೃದಯವನ್ನು ನೀರುಮಾಡುವ ಶಕ್ತಿಯಿದೆ; ಕಲ್ಲನ್ನೂ ಕರಗಿಸುವಂತಹ ಬಿಸಿ ಇದೆ.

ಈ ಸನ್ನಿವೇಶದಲ್ಲಿ ನನ್ನ ಪ್ರಶ್ನೆಯು ಅನುಚಿತವಾಯಿತೇ ಎಂದು ಕೂಡ ನನಗೆ ಹೊಳೆಯದಿರಲಿಲ್ಲ. ಆದರೆ ಮನಸ್ಸು ಪುನಃ ಸುಧೆಯ ಕಡೆಗೆ ಹರಿಯಿತು. ಹಾಗೆಯೆ ಅಕ್ಕನ ಬಳಿಯಿಂದ ಎದ್ದು ಹೋದೆ.

ಸುಧಾ ಮತ್ತೊಮ್ಮೆ ಸರಕ್ಕನೆ ನನ್ನನ್ನು ಹಾಯ್ದು ಹೋದಳು......

ಈ ಸಲ ನನ್ನನ್ನನುಲಕ್ಷಿಸಲು ಕೂಡ ಇಲ್ಲ!...

ನನ್ನ ನೆನಪಿನ ಚಕ್ರ ತಿರುಗತೊಡಗಿತು. ನಾನು ಬಾಲ್ಯವನ್ನು ಅದೇ ಊರಿನಲ್ಲಿ ಕಳೆದಿದ್ದೆ. ಆ ಮೇಲೆ ನಮ್ಮ ಆಸ್ತಿಪಾಸ್ತಿ ವಿಭಜನೆಯಾದ ನಂತರ ನಾನು ಬೇರೆ ಊರಿಗೆ ಹೋಗಿ ವಿದ್ಯಾಭ್ಯಾಸ ಹೊಂದಿ ದೊಡ್ಡವನಾದೆ. ಆದರೆ ಸುಧಾಳ ಬಾಲ್ಯಮುಖವನ್ನು ಎಂದೋ ನೋಡಿದ್ದ ಹಾಗೆ ನನಗೆ ಆಗೊಮ್ಮೆ ಈಗೊಮ್ಮೆ ಹೊಳೆಯುತಿತ್ತು......

...ಮನಸ್ಸು ಜಾಗ್ರತಾವಸ್ಥೆಯನ್ನು ಸಮೀಪಿಸುತ್ತಲಿತ್ತು. ಹಳೆತನದ ಮಸುಕು ಶುಭ್ರವಾಗುತ್ತ ಬರುತ್ತಿತ್ತು. ಹೌದು. ಸುಧಾ ಮತ್ತು ನಾನು ಬಾಲ್ಯದ ಗೆಳೆಯರು. ಸುಧಾ ಆಗ ನನಗಿಂತಲೂ ಚಿಕ್ಕವಳಾಗಿದ್ದಳು. ಅವಳ ತಂದೆತಾಯಿಗಳು ಅವಳನ್ನು ಅತಿ ಮಮತೆಯಿಂದ ಸಾಕುತಿದ್ದರು. ಆಗ ಅವಳಕೈಯ್ಯಲ್ಲಿ ಭಂಗಾರದ ಬಳೆಗಳು, ಕುತ್ತಿಗೆಯಲ್ಲಿ ಸರಪಳಿ, ಕಿವಿಯಲ್ಲಿ ಲೋಲಕುಗಳು, ಆಧುನಿಕವಾದ ಅಂಗಿಗಳು, ಎಲ್ಲ ಇದ್ದುವು. ಅವಳ ತಾಯಿಯು ಕೆಲಸಕ್ಕೆ ಹೋಗುವಾಗ ಕೆಲವೊಮ್ಮೆ ನಮ್ಮ ಮನೆಯಲ್ಲಿ ಬಿಟ್ಟು ಹೋಗುವುದೂ ಇತ್ತು... ಹೀಗೆ ಹಳೆಯ ಹಾಳೆಗಳು ತಿರುವಿದುವು.

ಈಗ?......ಈಗ ಈ ಸುಧಾಳಿಗೂ ನನಗೂ ಎಷ್ಟು ಅಂತರ! ನಾನಿಂದು ಸುಶಿಕ್ಷಿತ ನವಯುವಕನಾಗಿದ್ದು ನನ್ನ ಹೊಣೆಯನ್ನು ನಾನೇ ಹೊತ್ತಿದ್ದೇನೆ! ಸುಧಾ? ಅವಳನ್ನು ಬಾಲ್ಯದಲ್ಲಿ ಕಂಡವರು ಈಗ ಗುರುತಿಸಬೇಕಾದರೆ ಅವಳ ಜೀವನ ಪರಿವರ್ತನೆಯ ಕುರಿತಾದ ಪೂರ್ವ ಪೀಠಿಕೆ ಇಲ್ಲದೆ ಸಾಧ್ಯವೇ ಇಲ್ಲ! ಅಂದು ಹೃಷ್ಟಪುಷ್ಟವಾಗಿದ್ದ ಅವಳ ದೇಹವು ಇಂದು ಮುದಿ ಎತ್ತಿನ ಮೈಯ್ಯಂತೆ ಬಡಕಲಾಗಿದೆ; ಅಂದಿನ ಮುಖಕಾಂತಿಯನ್ನು ಇಂದು ಅವಳಲ್ಲಿ ನೆನೆಯಲಿಕ್ಕೇ ಸಾಧ್ಯವಿಲ್ಲ; ಅಂದಿನ ಅವಳ ಸುಖ—ಶಾಂತಿ—ವೈಭವಗಳಂತೂ ಇಂದು ಅವಳಿಗೆ ಸ್ವಪ್ನರಾಜ್ಯಕ್ಕಿಂತಲೂ ದೂರ...

—ಸುಧಾಳ ತಂದೆ ದೂಮಣ್ಣನನ್ನೂ ನೋಡಿದ ನೆನಪು ನನಗೆ ಬಂತು. ಅವನು ಆಗ ಟಪ್ಪಾಲಿನ ಬಟವಾಡೆ ಪೇದೆ. ಅವನ ಹೆಂಡತಿ ನೀಲು. ಅವಳು ಒಮ್ಮೊಮ್ಮೆ ನಮ್ಮ ಮನೆಗೂ ಕೆಲಸಕ್ಕೆ ಬರುವುದಿತ್ತು. ಸುಧಾಳ ನಂತರ ಅವಳು ಹಡೆದ ಗಂಡುಮಗುವೊಂದು ಆಗಲೆ ಮರಣ ಹೊಂದಿತ್ತು. ಹೀಗಾಗಿ ಅವರಿಬ್ಬರಿಗೂ ಸುಧಾ ಒಬ್ಬಳೇ ಮಗು-ಅತಿ ಪ್ರೀತಿಯ ಮಗು.

...ಆಮೇಲೇನಾಯಿತು? ಅದು ನನಗರಿಯದ ವಿಚಾರ. ಸುಧಾಳ ತಂದೆ ತಾಯಿ ಒಟ್ಟಿಗೆ ಎಲ್ಲಾದರೂ ಮೃತಪಟ್ಟರೆ? ಅಲ್ಲ, ಹಿಂದು ಮುಂದಾಗಿ ಮೃತಪಟ್ಟರೆ ? ಇಲ್ಲವೆ ಸುಧಾಳನ್ನು ನನ್ನ ಅಕ್ಕನಿಗೊಪ್ಪಿಸಿ ಎಲ್ಲಾದರೂ ಹೋಗಿಬಿಟ್ಟರೆ? ಎಂದು ನಾನು ಕಲ್ಪನಾಸಾಗರದಲ್ಲಿ ತೇಲಾಡಿದೆ.

ಹೀಗಿರುವಾಗ ನನ್ನ ಮಿತ್ರನೊಬ್ಬ ಬಂದ. ಕುಶಲಪ್ರಶ್ನೆಗಳಾದವು. ಆಗಲೂ ಸುಧಾಳಿಗೆ ಅಲ್ಲಿಂದ ಸರಕ್ಕನೆ ಕಾರ್ಯದ ನಿಮಿತ್ತ ಹಾದು ಹೋಗಬೇಕಾಯಿತು. ಮಿತ್ರನಿಗೆ ಅವಳ ತಂದೆ ತಾಯಿಯ ಕುರಿತೇನಾದರೂ ಗೊತ್ತಿದೆಯೆ ಎಂದು ಕೇಳಿದೆ. ಅದಕ್ಕವನು ಅವಳ ತಂದೆ ದೂಮಣ್ಣನ ಮೇಲೆ ನನ್ನ ಅಕ್ಕನ ಗಂಡನು ಏನೋ ಅಲ್ಲಸಲ್ಲದ ಕೃತ್ರಿಮ ಮೊಕದಮೆ ಹೂಡಿ ಅವನನ್ನು ದೀರ್ಘ ತುರಂಗವಾಸಕ್ಕಟ್ಟಿಸಿ, ಅವನ ಹೆಂಡತಿಗೆ ತಾನು ಆಶ್ರಯ ಕೊಡುತ್ತೇನೆಂದು ಆಕೆ ತೋರಿಸಿ ತಾಯಿ ಮಗಳಿಬ್ಬರನ್ನು ತನ್ನ ಮನೆಯಲ್ಲೇ ಇರಿಸಿಕೊಳ್ಳಲು ಸುಧಾಳ ತಾಯಿ ಬಸುರಿಯಾಗಿ ರಹಸ್ಯದಲ್ಲಿ ಗರ್ಭಪಾತಮಾಡಲೆತ್ನಿಸುವಾಗ ಸತ್ತಳೆಂದೂ ಅಂದಿನಿಂದ ಸುಧಾಳಿಗೆ ಅವರೇ ರಕ್ಷಕರಾಗಿರುವರೆಂದೂ ತಿಳಿದುಬಂತು.

ನನ್ನ ಮೈಜುಮ್ಮೆಂದಿತು... ಸುಧಾಳ ರಕ್ಷಕ ಅವಳ ತಾಯಿಯನ್ನು ಕೊಂದ ನನ್ನ ಭಾವ!...

ಮಿತ್ರನನ್ನು ಬೀಳ್ಕೊಟ್ಟೆ.

ಅಕ್ಕ ಕಾಫಿ ಕುಡಿಯಲು ಒಳಗೆ ಕರೆದಳು. ಹೋಗಿ ಕಾಫಿಯ ಬಳಿ ಕುಳಿತುಕೊಂಡೆ. ಸುರುಳಿ ಸುರುಳಿಯಾಗಿ ಆವಿಯನ್ನು ಹೊರಡಿಸುತ್ತಿದ್ದ ಕಾಫಿಗಿಂತಲೂ ನನ್ನ ತಲೆ ಹೆಚ್ಚು ಬಿಸಿಯಾಗಿತ್ತಾಗ!

ಅಕ್ಕ ಒದರತೊಡಗಿದಳು: "ಮಂಜೂ ! ರಾಯರ ವಸ್ತ್ರ ಒಗೆದು ಹಾಕೇ! ನೀನೇನು ಗದ್ದುಗೆ ಏರಿ ಕುಳಿತಿರುವೆ? ಇಕೋ ಅನ್ನ ಬಡಿಸಿಟ್ಟದ್ದೇನೆ ಇಲ್ಲಿ. ಒಗೆದುಕೊಂಡು ಬಂದು ಬೇಗನೆ ಉಂಡು ಅಂಗಡಿಯಿಂದ ಅಕ್ಕಿ ತಾ".

"ತುಸು ತಲೆ ನೋಯುತ್ತದಮ್ಮ. ಊಟವೇ ಬೇಡವೆಂದೆನಿಸುತ್ತದೆ..." ಎಂದು ಬಂತು ಸುಧಾಳ ದೀನ ಉತ್ತರ.

"ತಲೆನೋವು ! ಹ್ಹ ! ತಲೆನೋವು ! ಊಟ ಬೇಡವಾದರೆ ಚಿಂತೆಯಿಲ್ಲ. ನಾಳೆಗೆ ಆದೀತು. ಅನ್ನಕ್ಕೆ ನೀರು ಹಾಕಿ ಇಡುತ್ತೇನೆ. ವಸ್ತ್ರ ಒಗೆದು ಬೇಗನೆ ತಂದು ಅಂಗಡಿಗೆ ಹೋಗು."

"ಅಯ್ಯೋ!......"

"ಏನು ನಿನ್ನ ತಲೆಗೆ ಯಾರಾದರೂ ಹೊಡೆದರೇ? ನಡೆ ಬೇಗ. ನಿನ್ನ ಮಂಗಳಾರತಿಯನ್ನು ಬಂದವರೀಗೂ ತೋರಿಸುವುದು ಬೇಡ."

"ಹೂಂ. ಆಯಿತಮ್ಮ ಹೋಗುವೆನು..." ಎನ್ನುತ್ತ ಸುಧಾ ವಸ್ತ್ರದ ಗಂಟನ್ನು ಹಿಡಕೊಂಡು ಹೋದಳು.

ಒಣಗಿದ ಮರದ ಒತ್ತಾಯದ ಅಲುಗಾಟದಂತೆ ಕಾಣಬರುತ್ತಿತ್ತು ಅವಳ ನಡಿಗೆ; ಕೂದಲುಗಳು ಅತ್ತಿತ್ತ ಹಾರುತ್ತಿದ್ದುವು; ಹರಕು ಸೀರೆಯ ಸೆರಗು ಗಾಳಿಯಲ್ಲಿ ರಪರಪೆನ್ನುತ್ತ ಬಡಿದುಕೊಳ್ಳುತ್ತಿತ್ತು......

......ಹಾಗೆಯೇ ಅವಳು ಹೋಗಿಯೇ ಬಿಟ್ಟಳು. ನನ್ನ ಕಾಫಿಯ ಲೋಟವೂ ಬರಿದಾಯಿತು......

......ಮನಸ್ಸು ಮಾತ್ರ ಅವಳೊಡನೇ ಹರಿದಿತ್ತು.

"ಆ ಹುಡುಗಿಗೆ ಎಷ್ಟು ಹೇಳಿದರೂ ಇಲ್ಲ! ಗಂಡಸರ ಚಿಂತೆ ಹಿಡಿದಿದೆ ಆ ಮಾರಿಗೆ" ಎಂದು ಅಕ್ಕ ಒಳಗೆ ಗೊಣಗುಟ್ಟುತಿದ್ದಳು.

"ಏನಕ್ಕ ಇದು ? ಅವಳಿಗೇನೋ ತಲೆನೋವಂತೆ ಅಲ್ಲ! ಪಾಪ, ಜೀವವಿರುವಾಗ ಎಲ್ಲರಿಗೂ ಬೇನೆಗಳು ಇದ್ದುದೇ" ಎಂದು ನಾನು ತತ್ವಶಾಸ್ತ್ರವನ್ನು ಪ್ರತಿಪಾದಿಸುವಷ್ಟರಲ್ಲಿ ಅವಳು ನಡುವೆ ಬಾಯಿಹಾಕಿ,

"ಹ್ಹ ! ನಿನ್ನ ಮೇಲೆ ಮಂಕುಬೂದಿ ಎರಚಿಯೇ ಬಿಟ್ಟಳಲ್ಲ ! ಅವಳೊಮ್ಮೆ ಬರಲಿ" ಎಂದು ಕಿಡಿಕಾರಿದಳು.

"ಹಾಗಲ್ಲಕ್ಕ, ನನಗೆ ಮಂಕುಬೂದಿ ಎರಚುವುದಂತಿರಲಿ. ನಿನ್ನೊಲವಿನ ಭಾವ ಅವಳ ತಾಯಿಗೆ ಮಂಕುಬೂದಿ ಎರಚಿದ್ದು ಹೇಗೆ ?" ಎಂದು ನಗುತ್ತ ಕೇಳಿದೆ.

"..............."

"ನೋಡು, ಅವಳೀಗ ನಿಮ್ಮ ಅನ್ನಕ್ಕೆ ಬಂದು ಬಿದ್ದುದರಿಂದ ನೀನು ಅವಳ ಮೇಲೆ ಇಷ್ಟು ಒಡೆತನದ ದರ್ಪ ತೋರಿಸುತ್ತಿರುವಿ. ಅವಳ ತಂದೆ ತಾಯಿಗಳು ಬದುಕಿರುತಿದ್ದರೆ ! ಈ ಮನೆಗೆಂದಾದರೂ ಬರುತಿದ್ದಳೆ? ನೀನೇ ಹೇಳು."

ಅವಳ ಮುಖದಲ್ಲಿ ತೀಕ್ಷ್ಣತೆ ಸಲಿಯುತಿತ್ತು. ಆದರೆ ನನ್ನ ಮಾತು ಅವಳ ಮಾತನ್ನು ಬಂಧಿಸಿತ್ತು.

"ನಿನ್ನ ಸತ್ತುಹೋದ ಮಗುವಿನ ಹೆಸರಿಗಾಗಿ ನೀನು ಆಗ ಅಷ್ಟು ರೋದಿಸಿದೆ. ಈಗ ನೀನು ಅವಳಿಗೆ ಕೊಡುತ್ತಿರುವ ಕಷ್ಟಗಳನ್ನು ಅವಳ ತಾಯಿಯು ಕಣ್ಣಾರೆ ನೋಡುತಿದ್ದರೆ ಏನು ಮಾಡುತಿದ್ದಳು? ನೀನೇ ಯೋಚಿಸು" ಎಂದು ಕೇಳಿದೆ.

ಅವಳಾಗ ತಡೆಯಲಾರದೆ, "ನಿನಗೆಲ್ಲ ಇಲ್ಲಿಯ ವಿಚಾರ ಏನು ಗೊತ್ತು ? ಇವರನ್ನೆಲ್ಲ ಹೀಗೆಯೇ ಬಿಟ್ಟರೆ ಲೋಕ ಸಾಗಲಿಕ್ಕಿಲ್ಲ ತಿಳಿಯಿತೇ ?" ಎಂದು ಪ್ರತಿಭಟಿಸಿದಳು.

"ಲೋಕ ಇದಕ್ಕಿಂತಲೂ ಒಳ್ಳೇದಾಗಿ ಸಾಗೀತಕ್ಕ. ಆದರೆ ನಮ್ಮಂಥವರ ಈ ದರ್ಪ ಮಾತ್ರ ಸಾಗಲಿಕ್ಕಿಲ್ಲ" ಎಂದು ಚುಟುಕಿನಲ್ಲಿ ವಾದಿಸಿದೆ.

ಅಕ್ಕನ ಮುಖ ಕೆಂಪುಕೆಂಪಾಗಿತ್ತು. ಅವಳಿಗೆ ತುಸುಹೊತ್ತಿನ ವರೆಗೆ ಏನು ಹೇಳಬೇಕೆಂದು ತೋಚಲೇ ಇಲ್ಲ. ಕಡೆಗೆ "ನಿನಗಿದೆಲ್ಲ ಏಕೆ ? ಸುಮ್ಮನಿರು" ಎಂದಳು.

"ಸುಮ್ಮನಿರುವುದಕ್ಕೆ ನನ್ನ ಅಡ್ಡಿಯಿಲ್ಲ. ಆದರೆ ನೋಡು, ನೀನೀಗ ಅವಳ ಹೆಸರು ಬದಲಾಯಿಸಿರುವೆ. ಅವಳ ಹೃದಯವನ್ನು ಬದಲಾಯಿಸಲೂ ನಿನಗೆ ಶಕ್ತಿ ಇದೆಯೇ ? ಅವಳಿಗೂ ನಿನ್ನಲ್ಲಿರುವಂತಹ ಅಂತಃಕರಣವೆಂಬ ಒಂದು ವಸ್ತು ಇದೆ ಎಂಬುದನ್ನರಿಯದವಳಂತೆ ಅವಳನ್ನು ನಡೆಸುತ್ತಿರುವೆ. ಚೆನ್ನಾಗಿ ನೀನು ಯೋಚಿಸಿದರೆ ನಿನ್ನ ಸುಧಾಳಿಗೂ ಅವಳಿಗೂ ಏನು ಭೇದವಿದೆ ? ಇಬ್ಬರೂ ಹೆಣ್ಣುಗೂಸುಗಳು. ಹೀಗಿರುವಾಗ ನೀನು ನಿನ್ನ ಮಗಳನ್ನು ಬರೇ ನೆನೆಯುವಾಗಲೇ ದುಃಖಿಸುವೆ! ಅವಳಂಥ ಈ ಸುಧಾ ಜೀವಂತವಾಗಿ ನಿನ್ನೆದುರು ಇರುವಾಗ ಇವಳನ್ನು ಮಾತ್ರ ಕ್ಷಮಿಸಲಾರೆ! ನಿನ್ನ ಸಹಾನುಭೂತಿಯನ್ನು ತೋರಿಸಲಾರೆ! ಅವಳನ್ನು ಪ್ರೀತಿಸಲಾರೆ!"

"ರಾಜೂ!"

"ಅವಳೇನೂ ಪಶುವಲ್ಲ. ನಿನ್ನ ಮಗಳಂತೇ ಅವಳನ್ನು ಪ್ರೀತಿಸತೊಡಗು. ಅವಳಿಗೆ ನಿನ್ನ ಪತಿಯೇ ಅನ್ಯಾಯ ಮಾಡಿರುವನು !" ಎಂದು ನನ್ನ ವಾದವನ್ನು ಕೊನೆಗೊಳಿಸಿದೆ.

ಅಕ್ಕ ಮತ್ತೆ ನನ್ನೊಡನೆ ಮಾತನಾಡಲೇ ಇಲ್ಲ—ಮಾತನಾಡುವುದು ಬಿಟ್ಟು ನನ್ನೆದುರೇ ಅವಳಿಗೆ ನಿಲ್ಲಲಾಗಲಿಲ್ಲ. ಸಂಜೆ ಕಳೆಯಲು ನಾನು ಎತ್ತಲೋ ಹೊರಗೆ ಹೋದೆ.

ಮರುದಿನ ನಾನು ಹಾಸಿಗೆಯಿಂದ ಎದ್ದಿರಲಿಲ್ಲ. ಅಕ್ಕ "ಸುಧಾ, ಅಡಿಗೆಗೆ ನೀರು ತಾ" ಎನ್ನುವುದು ಕೇಳಿಸಿತು. ಆಗಿನ ನನ್ನ ಸುಖವು ಸ್ವರ್ಗಸುಖಕ್ಕಿಂತಲೂ ಮಿಕ್ಕಿತ್ತು.

ಮೆಲ್ಲನೆ ಕಣ್ಣುಜ್ಜುತ್ತ ಹೊರಬಂದೆ. ನಿನ್ನೆಯ "ಮಂಜು" ಇಂದು "ಸುಧಾ" ಆಗಿದ್ದಳು. ಅವಳ ವೇಷಭೂಷಣಗಳು ನನ್ನ ಊಹೆಗಿಂತಲೂ ಹೆಚ್ಚಾಗಿ ಪರಿವರ್ತನೆ ಹೊಂದಿದ್ದವು.

—ಮುಂಚಿನ ದಿನ ಸುಧಾಳನ್ನು ನಾನು ಮನೆಯೊಳಗೆ ಕಂಡೇ ಇರಲಿಲ್ಲ. ಈ ದಿನ ನನ್ನ ಬೆಳಗ್ಗಿನ ಕಾಫಿ ಅವಳಿಂದಲೇ ತಯಾರಾಗಿತ್ತು.

ಮಂಜಿನಿಂದ ಮುಚ್ಚಿಹೋಗಿದ್ದ ಸುಧಾಳು ನನಗಿತ್ತ ಕಾಫಿ ನಿಜವಾಗಿಯೂ ಸುಧೆಯಂತಿತ್ತು—ನೀರಿನ ರುಚಿಗಿಂತಲೂ ಅದನ್ನಿತ್ತ ಹೃದಯದ ಯಥಾರ್ಥತೆಯ ರುಚಿ ಮಿಗಿಲಲ್ಲವೇ?

ಮತ್ತೆ ನೋಡುವಾಗ ನನ್ನಕ್ಕನೇ ಸುಧಾಳ ತಲೆ ಬಾಚುತಿದ್ದಳು; ಜಡೆ ಹೆಣೆಯುತಿದ್ದಳು. ಸುಧಾ ಅಂಜಿಕೆಯಿಂದಲೂ ವಿಸ್ಮಯಪೂರಿತ ನಾಚಿಕೆಯಿಂದಲೂ ಕುಳಿತಿದ್ದಳು.

ನಾನು ಅಂಗಿ ಹಾಕಿಕೊಂಡು, "ಹೋಗಿ ಬರುತ್ತೇನೆ ಅಕ್ಕ" ಎಂದು ಅವಳ ಮೌನವನ್ನು ಭೇದಿಸಿದೆ.

"ಇಷ್ಟೇನು ಅವಸರ ?" ಎಂದು ನನ್ನ ಮುಖ ನೋಡದೆ ಅಕ್ಕ ಕೇಳಿದಳು. ಅವಳ ಮಾತಿನಲ್ಲಿ ಮಂಜು ಬೆರೆತಿತ್ತು—ಕಾವನ್ನು ಆರಿಸಿತ್ತು.

"ಇನ್ನೊಮ್ಮೆ ಬರುವೆ. ಸೊಸೆಗೆ ಆಶೀರ್ವಾದ"ವೆನ್ನುತ್ತ ನಾನು ಸಿಳ್ಳುಹಾಕುತ್ತ ನಡೆದೇ ಬಿಟ್ಟೆ ನನ್ನ ಊರಿನತ್ತ.

... ... ಮಂಜು ಸುಧೆಯಾಯಿತು. ... ...

# ಭವಿಷ್ಯ

ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

## ಡಿಸೆಂಬರ ೯ ರಿಂದ ೧೫ ರ ವರೆಗೆ

### ಮೇಷ

ಪ್ರಕೃತಿ ಉತ್ತಮ. ಸ್ತ್ರೀ ಸುಖ ಅನುಕೂಲ ಆದರೆ ಉಳಿದ ಪ್ರಾಪಂಚಿಕ ವಿಷಯಗಳಲ್ಲಿ ಮನಸಿಗೆ ಬಹಳ ವಿರಸವಾಗುವಂಥ ಪ್ರಸಂಗಗಳು. ಉದ್ಯೋಗದಲ್ಲಿ ಪ್ರಗತಿ ಜೋರಿನಿಂದ ಮತ್ತು ಪ್ರತಿಷ್ಠೆ ದೊಡ್ಡ ಪ್ರಮಾಣದಿಂದ ಆಗುವ ಘಟನೆಗಳು. ಆದರೆ ಆ ಮಾನದಿಂದ ಲಾಭ ಕಡಮೆ. ಅಗಣಿತ ವಿಚಾರಗಳ ಝುರಿ ಹಿಮ್ಮೆಲೆ ಹರಿಯುವ ಅಂಜಿಕೆ. ಬಹಳ ಮಾತುಗಳಲ್ಲಿ ನಿಶ್ಚಿತ ಅಭಿಪ್ರಾಯದ ಅಭಾವ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ನೇ ಚರಣಕ್ಕೆ ತೊಂದರೆ ಕಡಮೆ. ತಾ. ೯, ೧೦, ೧೪, ೧೫. ಅನುಕೂಲ.

### ವೃಷಭ

ಪ್ರಕೃತಿ ಬಹಳ ಕುಂದುವ ಚಿನ್ಹಗಳು. ಪಚನವಾಗದಿದ್ದುದನ್ನು ತಿನ್ನುವ ಮತ್ತು ರುಚಿಸದಿದ್ದುದನ್ನು ನುಡಿಯುವ ತಪ್ಪು ಮೇಲಿಂದ ಮೇಲೆ ಮಾಡುವ ಪ್ರಸಂಗ ಅಸ್ತಿಯಲ್ಲಿ ಸ್ವಲ್ಪ ಹೆಚ್ಚಳ. ಆದರೆ ಆದಕ್ಕಾಗಿ ವಸ್ತುಸ್ಥಿತಿಗಿಂತ ಹೆಚ್ಚು ವೆಚ್ಚ ಮಾಡುವ ಸರತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಉತ್ತಮ. ಆದರೆ ಲಾಭದಲ್ಲಿ ಬಹಳ ಕೊರತೆ. ಮಿತ್ರರಿಗಿಂತ ಹಿತಶತ್ರುಗಳೇ ಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿಮ್ಮೆಡುವದು. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಅನುಕೂಲ. ಆದರೆ ರೋಹಿಣಿಯ ಕೊನೆಯ ಮೂರು ಮತ್ತು ಮೃಗಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೦, ೧೧, ೧೩ ಅನುಕೂಲ.

### ಮಿಥುನ

ಪ್ರಕೃತಿ ಸಾಧಾರಣ ಕೆಡುವದು. ಹೆಂಡತಿಯ ಸಹವಾಸಸುಖ ಅನುಕೂಲ, ಆದರೆ ಅವಳ ದುರಭಿಮಾನದಿಂದ ಬಹಳ ತೊಂದರೆ ಕುಟುಂಬದಲ್ಲಿಯ ಇತರ ಜನರಿಂದ ಬಗೆಬಗೆಯ ತೊಂದರೆ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಸಾಧಾರಣವೆ. ಆದರೆ ಲಾಭ ಉತ್ತಮ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ತೊಂದರೆ ಮತ್ತು ವೆಚ್ಚ ಹೆಚ್ಚು. ಆದರೆ ಕೊನೆಗೆ ಅನುಕೂಲತೆ. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೦, ೧೧, ೧೪ ಅನುಕೂಲ.

### ಕರ್ಕ

ಪ್ರಕೃತಿ ಬಹಳ ಉತ್ತಮ. ಸ್ತ್ರೀ ಸುಖ ಮನಸಿನಂತೆ ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಪ್ರತಿಕ್ಷಣಕ್ಕೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೂ ಹಿತಶತ್ರುಗಳು ಅವುಗಳಲ್ಲಿ ಅಡಚಣಿ ತರುವ ದೀರ್ಘ ಪ್ರಯತ್ನ ಮಾಡುವರು. ಮಿತ್ರರಲ್ಲಿ ಕ್ಲೇಶ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ವಿಜಯ ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೧, ೧೨, ೧೩, ೧೪, ಅನುಕೂಲ.

### ಸಿಂಹ

ಪ್ರಕೃತಿ ಮತ್ತು ಸ್ತ್ರೀ ಸುಖ ಸಾಧಾರಣವೆ. ಆದರೆ ಮಕ್ಕಳಲ್ಲಿ ಸ್ವಲ್ಪ ಉನ್ನತಿಯಾಗಿ ಉಳಿದ ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಉದ್ಯೋಗದಲ್ಲಿ ಉತ್ತಮ ಪ್ರಗತಿ. ಆದರೆ ಲಾಭ ಮತ್ತು ಪ್ರತಿಷ್ಠೆ ಸಾಧಾರಣವೆ. ಪ್ರತಿಯೊಂದು ವಿಷಯಗಳಲ್ಲಿ ವೆಚ್ಚದ ಹೆಜ್ಜೆ ಯಾವಾಗಲೂ ಮುಂದೆಯೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಅಯಶಸ್ಸು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಮಿತ್ರರಲ್ಲಿ ಬಹಳ ವಿರೋಧ. ಮಘಾದ ಕೊನೆಯ ೩ ಮತ್ತು ಪೂರ್ವಾದ ಮೊದಲನೆ ಚರಣಕ್ಕೆ ತೊಂದರೆ ಕಡಮೆ. ತಾ, ೯, ೧೦, ೧೪, ೧೫, ಅನುಕೂಲ.

### ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಪ್ರಿಯಜನರ ಭೆಟ್ಟಿ ಸಂದರ್ಶನದ ಯೋಗ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆಗಾಗಿಯೆ ಬಹಳ ಪ್ರಯಾಸ, ಆದರೆ ಲಾಭ ಉತ್ತಮ. ಸ್ಥಾವರ ಜಂಗಮ ಸಂಗ್ರಹದಲ್ಲಿ ಸ್ವಲ್ಪ ಹೆಚ್ಚಳ. ಮಿತ್ರ ಸುಖ ಅತಿ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮ್ಮನೃತ್ತಿ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಹಸ್ತಾದ ಕೊನೆಯ ೩ ಮತ್ತು ಚಿತ್ರಾದ ೧ ನೇ ಚರಣಕ್ಕೆ ಅನುಕೂಲ. ತಾ. ೯, ೧೦, ೧೧, ೧೨, ಅನುಕೂಲ.

### ತುಲಾ

ಪ್ರಕೃತಿ ಮತ್ತು ಸ್ತ್ರೀಸುಖ ಅತಿ ಉತ್ತಮ. ಆದರೆ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ತೊಂದರೆ ಬಹಳ. ಮತ್ತು ಬೇಡಾದ ಅತಿಥಿಗಳ ಸಹವಾಸ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ದಗದಗಿಯಿಂದ ಮತ್ತು ಮನೋಭಂಗದಿಂದ ಆಗುವ ಯೋಗ. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಆದರೆ ಜಂಗಮದಲ್ಲಿಯ ಕೆಲವು ಬೆಲೆಯುಳ್ಳ ವಸ್ತು ಮಾಯವಾಗುವ ಸಂಭವ ಸ್ವಪ್ನ ಭಯಾನಕವಾದವುಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉತ್ತಮ ಯಶಸ್ಸು. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೦, ೧೧, ೧೪ ಅನುಕೂಲ,

### ವೃಶ್ಚಿಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಒಂದು ಕ್ಷಣಕ್ಕೆ ಒಳ್ಳೆಯದಾದರೆ ಮತ್ತೊಂದು ಕ್ಷಣಕ್ಕೆ ಪ್ರತಿಕೂಲ. ವಾಚಾಳತನದಿಂದ ನಿರರ್ಥಕವಾಗಿ ವಿರೋಧ. ಪ್ರತಿಯೊಂದು ಮಾತಿನಲ್ಲಿ ಆತ್ಮಸ್ತುತಿ ಮತ್ತು ಪರನಿಂದೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಉತ್ತಮವೆ. ಆದರೆ ವೆಚ್ಚವೂ ಬೆನ್ನಿಗೆ ಹತ್ತಿದ್ದೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಲೌಕಿಕಕ್ಕೆ ಸರಿಹೋಗದಂಥ ಕ್ಷುಲ್ಲಕ ಮಾತುಗಳತ್ತ ಲಕ್ಷ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಅನುರಾಧೆಯ ಕೊನೆಯ ೨ ಮತ್ತು ಜೇಷ್ಠಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೨, ೧೩, ೧೪, ೧೫ ಅನುಕೂಲ.

### ಧನು

ಪ್ರಕೃತಿ ಅನುಕೂಲ. ಆದರೆ ಹೆಂಡತಿಗೆ ಕ್ಲೇಶ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ತೊಂದರೆ ವಿಪರೀತ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಬಹಳ ಕಡಮೆ. ಆದರೆ ಲಾಭ ಅನುಕೂಲ. ಬಗೆ ಬಗೆಯ ವೆಚ್ಚಕ್ಕಾಗಿ ಆಳದಕ್ಕಿಯಾಗುವ ಸರತಿ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಹಾನಿ. ಪ್ರತಿಯೊಂದು ಕೆಲಸದಲ್ಲಿ ಬಹಳ ಮನೋಭಂಗ. ಆದರೆ ಮಕ್ಕಳಲ್ಲಿ ಬಹಳ ಉನ್ನತಿ. ಪ್ರವಾಸಾದಿ ಕೆಲಸ ಅತಿ ಕಷ್ಟದ್ದು. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೦, ೧೪, ೧೫ ಅನುಕೂಲ,

### ಮಕರ

ಪ್ರಕೃತಿ ಉತ್ತಮ, ಪ್ರತಿಯೊಂದು ವಿಷಯದಲ್ಲಿ ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಸ್ಥಾವರದಲ್ಲಿ ಸ್ವಲ್ಪ ಹಾನಿ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಜನರಲ್ಲಿ ಕುತೂಹಲ ಹುಟ್ಟುವಂಥ ಒಳ್ಳೆ ಪ್ರತಿಷ್ಠೆ. ಮತ್ತು ಲಾಭವೂ ಮನಸಿನಂತೆ. ಸ್ವಲ್ಪ ಅವಚಿತ ಲಾಭದ ಸಂಭವ, ಆದರೆ ಕಡಮೆಮಾಡಲಸಾಧ್ಯವಾದಷ್ಟು ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ. ಪ್ರವಾಸಾದಿ ಕೆಲಸ ಹಿತದ್ದು. ಶ್ರವಣಾದ ಕೊನೆಯ ೩ ಮತ್ತು ಧನಿಷ್ಠಾದ ೧ ನೇ ಚರಣಗಳಿಗೆ ತೊಂದರೆ ಕಡಮೆ. ತಾ. ೧೧, ೧೨, ೧೩ ಅನುಕೂಲ.

### ಕುಂಭ

ಪ್ರಕೃತಿ ಸಾಧಾರಣವೆ ಆದರೆ ಸ್ತ್ರೀಸುಖ ಅನುಕೂಲ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣವೆ ಉದ್ಯೋಗದಲ್ಲಿ ಒಳ್ಳೇ ಪ್ರಗತಿ ಪ್ರತಿಷ್ಠೆ ಸಮಾಧಾನಕರ ದೊಡ್ಡ ಲಾಭ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ವಿಜಯ. ಮಿತ್ರ ಸುಖ ಉತ್ತಮ. ರೋಖ ಸಂಗ್ರಹದಲ್ಲಿ ಹೆಚ್ಚಳ, ಅಧಿಕಾರ ಇಲ್ಲವೆ ದರ್ಜಸ್ವದ ಹೆಚ್ಚಳ. ಪ್ರವಾಸಾದಿ ಕೆಲಸ ಹಿತಕರದ್ದು. ಶತತಾರಿಕೆಯ ಕೊನೆಯ, ಮತ್ತು ಪೂರ್ವಾಭಾದ್ರಪದದ ೧ ನೇ ಚರಣಕ್ಕೆ ಹೆಚ್ಚು ಅನುಕೂಲ, ತಾ. ೧೦, ೧೧, ೧೪, ೧೫ ಅನುಕೂಲ.

### ಮೀನ

ಪ್ರಕೃತಿ ಸಾಧಾರಣವೆ ಸ್ತ್ರೀ ಸುಖ ಮತ್ತು ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸಮಾಧಾನ ಅನುಕೂಲ, ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ, ಆದರೆ ಎರಡನೆಯವರ ಹೆಸರಿನಲ್ಲಿ ಪ್ರತಿಷ್ಠೆ ಉಳಿಸಿಕೊಳ್ಳುವ ಪ್ರಸಂಗ, ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವಿಜಯ, ಮಿತ್ರಸುಖ ಉತ್ತಮ, ಸ್ಥಾವರದಲ್ಲಿ ಕೆಲ ಹೆಚ್ಚಳ. ಅವಚಿತ ಲಾಭದ ಸಂಭವ. ಪ್ರವಾಸಾದಿ ಕೆಲಸ ಬಹಳ ಹಿತದ್ದು. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ಹೆಚ್ಚು ಅನುಕೂಲ, ತಾ. ೯, ೧೨, ೧೩ ಅನುಕೂಲ.

## ಸರದಾರ ವಲ್ಲಭಭಾಯಿಯವರ ಭಾಷಣ

(೧ ನೇ ಪುಟದಿಂದ ಮುಂದುವರಿದದ್ದು)

ವೆಂಬುದನ್ನು ನೆನಪಿನಲ್ಲಿಡಿರಿ. ಲಂಡನಿಗೆ ಬರಲು ಜಿನ್ನಾರಿಗೆ ಅಮಂತ್ರಣ ಬಂದದ್ದರಿಂದ ಸಂತುಷ್ಟರಾಗುವಂತಿದ್ದರೆ ಆಗಲಿ. ಆದರೆ ಮುಖ್ಯ ಮಂತ್ರಿಗಳು ಕಾಮನ್ಸ ಸಭೆಯಲ್ಲಿ ಕೊಟ್ಟ ಹೇಳಿಕೆ ಮತ್ತು ಜವಾಹರಲಾಲರಿಗೆ ಕಳಿಸಿದ ಬಿನ್ನಹ ಪತ್ರದಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅನುಲಕ್ಷಿಸಿ, ಕಾಂಗ್ರೆಸು ಈ ವಿನಂತಿಗೆ ಮನ್ನಣೆ ಕೊಟ್ಟು ಅಮಂತ್ರಣ ಸ್ವೀಕರಿಸಿದೆ. ಆದರೆ ಮೊದಲು ನಿರ್ಧರಿಸಿದಂತೆ ಡಿಸೆಂಬರ ೯ ನೇ ದಿನ ಘಟನಾ ಸಮಿತಿ ಸೇರುವದು ನಿಶ್ಚಿತ. ಆಕಾಶವೇ ಜರಿದು ಬೀಳಲಿ, ಭೂಮಿಯೇ ಬಿರಿಯಲಿ, ಪಂ. ಜವಾಹರರು ಲಂಡನ್ನಿನಿಂದ ಮರಳಿ ಬರಲಿ, ಬಿಡಲಿ ಘಟನಾ ಸಮಿತಿಯನ್ನು ಕೂಡಿಸಲು ನಾವು ನಿರ್ಧರಿಸಿದ್ದೇವೆ, ಮತ್ತು ಘಟನಾ ನಿರ್ಮಾಣಕ್ಕೆ ಆರು ತಿಂಗಳಿಗಿಂತ ಹೆಚ್ಚು ಹಿಡಿಯದಂತೆ ನೋಡಿಕೊಳ್ಳುವೆವು. ಜಿನ್ನಾರು ಮರಳಿ ಬರಲಿ, ಇಲ್ಲವೆ ಲಂಡನದಲ್ಲಿಯೇ ಇರುವದಾಗಿ ನಿಶ್ಚಯಿಸಲಿ, ಘಟನಾ ಸಮಿತಿಯು ತನ್ನ ಕಾರ್ಯ ಸಾಗಿಸುವದು.

ನಾನೇನು ರಾಜಕಾರಣ ಚತುರನಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ಪ್ರಾಮಾಣಿಕವಾದ ಸರಳ ಮಾರ್ಗದಲ್ಲಿ ನಮ್ಮ ವಿಶ್ವಾಸವಿದೆ. ನಾವು ಅಧಿಕಾರ ಸ್ವೀಕರಿಸುವಾಗ ಜನತೆಯ ಸೇವೆಗಾಗಿ ಅಧಿಕಾರ ಸ್ವೀಕರಿಸಿದ್ದೇವೆ.

### ಕಾಂಗ್ರೆಸ್ಸು ರಾಜೀನಾಮೆ ಕೊಡುವದಿಲ್ಲ

ಜನತೆಯ ಅಜ್ಞೆಯಾದ ಹೊರ್ತು ನಾವು ಈ ಅಧಿಕಾರ ಸೂತ್ರಗಳನ್ನು ಬಿಟ್ಟು ಕೊಡಲಾರೆವು. ಲೀಗಿನವರು ಹೊರಬೀಳುವದಾದರೆ, ನಾವು ಇತರರ ಸಹಕಾರದಿಂದ ರಾಜ್ಯಶಕಟ ನಡೆಸುವೆವು. ನನ್ನ ಸಂಗಡಿಗರೆಲ್ಲ ಹೊರಬಿದ್ದು ಹೋದರೂ ನಾನೊಬ್ಬನೇ ಆದರೂ ಗಟ್ಟಿಯಾಗಿ ಕುಳಿತುಕೊಳ್ಳುವೆ. ಕಾಂಗ್ರೆಸ್ಸಿನ ಕೈಯಲ್ಲಿ ಕೊಟ್ಟ ಅಧಿಕಾರವನ್ನು ಕಾಂಗ್ರೆಸು ಬಿಟ್ಟು ಕೊಡಲಾರದು. ಈಗಿನ ನಡುಗಾಲ ಸರಕಾರವು ೧೯೧೯ ನೇ ಹಿಂದುಸ್ತಾನ ಕಾನೂನಿನಂತೆ ರಚಿತವಾಗಿದೆ ಎಂದು ಜಿನ್ನಾರ ವಾದ. ಆದರೆ ಬ್ರಿಟಿಶ ಸರಕಾರದವರೇ ಸದ್ಯದ ಹಿಂದುಸ್ತಾನ ಸರಕಾರವು 'ವಸಾಹತು ಸರಕಾರದ ದರ್ಜೆಯ ಅಧಿಕಾರಗಳನ್ನೂ ನಡೆಯಿಸಬಹುದು.' ಎಂದು ಸಾರಿದ್ದಾರೆ. ಕಾನಡಾ, ಅಸ್ಟ್ರೇಲಿಯಾಗಳ ಸರಕಾರದಂತೆ ನಾವು ವರ್ತಿಸುವೆವು. ಆದುದರಿಂದ ನಾವು ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿ ನಮ್ಮ ರಾಯಭಾರಿ ಕಚೇರಿಗಳನ್ನು ಸ್ಥಾಪಿಸುವೆವು.

### ಶಾಂತತೆ ಅವಶ್ಯ

ಈ ಸಂದರ್ಭದಲ್ಲಿ ದೇಶದಲ್ಲಿಯ ಶಾಂತತೆ ಸುವ್ಯವಸ್ಥೆ ಕಾಯ್ದು ಕೊಳ್ಳುವದು ಅಗತ್ಯವಿದೆ. ಕಲಕತ್ತೆಯ ಹತ್ಯಾಕಾಂಡವಾದ ನಂತರ ನೌಖಾಲಿ, ತಿಪ್ಪೇರಾ, ಜಿಲ್ಹೆಗಳಲ್ಲಿ ಎಷ್ಟೋ ಅತ್ಯಾಚಾರಗಳ ಕೃತ್ಯಗಳು ನಡೆದವು. ಬಂಗಾಲ ಬರಗಾಲದಲ್ಲಿ ೩೦ ಲಕ್ಷ ಜನರು ಸಾವಿಗೆ ತುತ್ತಾದರು. ಆದರೆ ಈ ಅತ್ಯಾಚಾರಗಳಲ್ಲಿ ನಡೆದ ಹತ್ಯಾಕಾಂಡದಿಂದ ಬಂಗಾಲ ಬರಗಾಲಕ್ಕಿಂತಲೂ ಜನರಲ್ಲಿ ಹೆಚ್ಚು ಕನಿಕರವನ್ನುಂಟು ಮಾಡಿದೆ. ಬಂಗಾಲ ಲೀಗ ಮಂತ್ರಿಮಂಡಳವನ್ನು ಮನೆಗೆ ಕಳಿಸಿರಿ, ಎಂದು ಕೆಲವು ಕಡೆಯಿಂದ ಸೂಚನೆ ಬಂದವು. ಕೇಂದ್ರ ಸರಕಾರವು ಬಂಗಾಲ ಗಲಭೆಗಳನ್ನು ನಿಲ್ಲಿಸಲು ಏನೂ ಮಾಡದೇ ಯಾಕೆ ಸ್ವಸ್ಥ ಕುಳಿತಿದೆ ಎಂದೂ ಕೇಳಲಾಯಿತು. ಆದರೆ ಈಗ ೧೯೪೨ ನೇ ಇಸ್ವಿಯಲ್ಲ. ಇದನ್ನು ಲಕ್ಷ್ಯದಲ್ಲಿಡಿರಿ, ೧೯೪೨ ರಲ್ಲಿ ಅರ್ಡಿನನ್ಸ ರಾಜ್ಯವಿತ್ತು. ಆಗ ಕೇಂದ್ರ ಸರಕಾರವು ಪ್ರಾಂತಿಕ ಆಡಳಿತೆಯಲ್ಲಿ ಬೇಕಾದ ಹಾಗೆ ಕೈಹಾಕಲು ಬರುತ್ತಿತ್ತು. ಈಗ ಪ್ರಾಂತಿಕ ಸ್ವಾಯತ್ತತೆ ಇದೆ. ಪ್ರಾಂತಗಳ ಆಡಳಿತೆಯಲ್ಲಿ ಕೇಂದ್ರ ಸರಕಾರವು ಕೈಹಾಕಲು ಬರುವದಿಲ್ಲ. ಆದರೆ ಪರಿಸ್ಥಿತಿಹೀಗೆಯೇ ಇರುವದಾದರೆ ಕೇಂದ್ರ ಸರಕಾರದ ಕರ್ತವ್ಯ ವೇನು? ಎಂಬ ಪ್ರಶ್ನೆ ಉದ್ಭವಿಸುವದು, ಇರಲಿ, ಕಲಕತ್ತೆಯಿಂದ ಬಿಹಾರಕ್ಕೆ ಎಷ್ಟೋ ಜನರು ಓಡಿಹೋದರು. ನೌಖಾಲಿ ದುರಂತವಾದನಂತರ ಅಲ್ಲಿಯ ಎಷ್ಟೋ ನಿರಾಶ್ರಿತರು ಬಿಹಾರದಲ್ಲಿ ಹೋಗಿ ಅಲ್ಲಿ ನಡೆಯುವದನ್ನು ತಿಳಿಸಿದರು. ಆಗ ಅಲ್ಲಿಯ ಪರಿಸ್ಥಿತಿ ತೀರ ಹದಗೆಟ್ಟಿತ್ತು. ಆಗ ಲೀಗಿನ ಮುಖಂಡರು ಕಣ್ತೆರೆದರು. ಕೇಂದ್ರ ಸರಕಾರವು ಪ್ರಾಂತಿಕ ಆಡಳಿತೆಯಲ್ಲಿ ಯಾಕೆ ಕೈಹಾಕಬಾರದು ಎಂದು ಕೇಳತೊಡಗಿದ್ದರು. ಆದರೆ ಬಂಗಾಲ ಪ್ರಾಂತಕ್ಕೆ ಅನ್ವಯಿಸುವ ಮಾತೇ ಬಿಹಾರಕ್ಕೂ ಅನ್ವಯಿಸುವದೆಂಬ ಮಾತನ್ನು ಅವರು ಸುಲಭವಾಗಿ ಮರೆತುಬಿಟ್ಟರು. ನಾನು ಪರಿಸ್ಥಿತಿಯನ್ನು ಅನಿಯಂತ್ರಿತವಾಗಿ ಹೀಗೆಯೇ ಸಾಗಗೊಡಬೇಕೆಂದು ಒಂದು ಕ್ಷಣ ಸಹ ಹೇಳಲಾರೆ. ಸೇಡು ತೀರಿಸುವ ಹುಚ್ಚನ್ನು ನೋಡಿ ನನಗೆ ಸಂತಾಪವಾಗುವದು. ಇಂದಿನ ವರೆಗೆ ಎಷ್ಟೋ ತಲೆಗಳಿಂದ ಅಣ್ಣತಮ್ಮಂದಿರಂತೆ ಇದ್ದ ಭಿನ್ನ ಭಿನ್ನ ಜಾತಿಯ ಜನರು ಇಂದು ಒಮ್ಮೆಲೇ ತಾವು ಭಿನ್ನ ಭಿನ್ನ ರಾಷ್ಟ್ರಗಳ ಜನಾಂಗಗಳೆಂದು ಭಾವಿಸಿ ಒಬ್ಬರ ಕುತ್ತಿಗೆ ಒಬ್ಬರು ಹಿಚುಕುವದನ್ನು ಕಂಡು ನನಗೆ ಅತೀವ ದುಃಖವಾಗುವದು. ಕ್ರೂರ ಕೃತ್ಯಗಳು ನೌಖಾಲಿಯಲ್ಲೇ ಆಗಲಿ, ಬಿಹಾರದಲ್ಲೇ ಆಗಲಿ ನಾವು ಅವುಗಳನ್ನು ಖಂಡಿಸಲೇಬೇಕು. ಲೀಗಿನ ಮುಖಂಡರಿಗೆ ಈ ಅಶಾಂತಿಯ ಮೂಲ ಕಾರಣ ಕಂಡು ಹಿಡಿದು ಅದನ್ನು ನಿರ್ಮೂಲ ಮಾಡಲು ಬಿನ್ನವಿಸುವೆ. ಪಾಕಿಸ್ತಾನವಿಲ್ಲದಿದ್ದರೆ ಹಿಂದುಸ್ತಾನದಲ್ಲಿ ಶಾಂತಿಯಿರಲಾರದೆಂದು ಜಿನ್ನಾರು ಹೇಳುವರು. ನಾನೆನ್ನುವೆ ಪಾಕಿಸ್ತಾನ ಕೊಟ್ಟರೆ ಜಗತ್ತಿನಲ್ಲಿಯೆ ಶಾಂತಿ ಉಳಿಯದೆಂದು. ದೇಶದಲ್ಲಿ ಶಾಂತತೆ ಬೇಕಾಗಿದ್ದರೆ ನಿಮ್ಮ ಈ ಪಾಕಿಸ್ತಾನದ ಹೂಲಿಯನ್ನು ನಿಲ್ಲಿಸಿರಿ. ಹಿಂಸೆಯಿಂದ ಪಾಕಿಸ್ತಾನ ದೊರೆಕಿಸುವ ಹವ್ಯಾಸ ಬಿಟ್ಟು ಕೊಡಿರಿ. ಹಿಂಸೆ, ರಕ್ತಪಾತದಿಂದ ಆದು ದೊರೆಯಲಾರದು. ನಿಮಗೆ ಪಾಕಿಸ್ತಾನವೇ ಬೇಕಾಗಿದ್ದರೆ ಅದು ಸಮಂಜಸವಾದ ಬೇಡಿಕೆ ಎಂದು ನಮಗೆ ಖಾತ್ರಿಮಾಡಿಕೊಡಿರಿ. ಬ್ರಿಟಿಶ ಸರಕಾರದವರು ಪಾಕಿಸ್ತಾನ ಕೊಡಲಾರರು. ಈಗಾಗಲೇ ಅವರು ಹಿಂದುಸ್ತಾನ ಬಿಟ್ಟು ಹೋಗುವೆವೆಂದು ಹೇಳಿದ್ದಾರೆ. ಆದುದರಿಂದ ನಿಮಗೆ ಪಾಕಿಸ್ತಾನ ಕೊಡುವದಾದರೆ ನಾವು ಮಾತ್ರ ಕೊಡಬಲ್ಲೆವು.

ಸಂರಕ್ಷಣೆಗಾಗಿ ಪೋಲೀಸು, ಮಿಲಿಟರಿಯವರನ್ನು ಅವಲಂಬಿಸಕೂಡದು. ಯಾವದೇ ಗಂಡಾಂತರದಲ್ಲಿಯೂ ಸ್ವಸಂರಕ್ಷಣೆಯೇ ಹೆಚ್ಚಿಗೆ ಫಲಕಾರಿಯಾದುದು. ಸ್ವತಂತ್ರ ಹಿಂದುಸ್ತಾನದಲ್ಲಿ ಪ್ರತಿಯೊಬ್ಬನು ಪೋಲೀಸನೇ ಆಗಬೇಕು. ಅವನು ತನ್ನ ಹಾಗೂ ತನ್ನ ನೆರೆಹೊರೆಯವರ ರಕ್ಷಣೆ ಮಾಡುವದನ್ನು ಕಲಿಯಬೇಕು. ಮಹಾತ್ಮಾಜಿಯವರು ಹೇಳುವಂತೆ ಅಹಿಂಸೆಯ ಮೂಲಕ ನಿಮ್ಮ ಮೇಲೆ ಏರಿ ಬರುವವರನ್ನು ಎದುರಿಸುವದು ಶಕ್ಯವಿಲ್ಲದಿದ್ದರೆ, ಹಿಂಸೆಯಿಂದ ಆತ್ಮರಕ್ಷಣೆ ಮಾಡಿಕೊಳ್ಳಲು ಏನೂ ಪ್ರತಿಬಂಧವಿಲ್ಲ. ಆದರೆ ಹೇಡಿಯಂತೆ ಎಂದಿಗೂ ಓಡಿ ಹೋಗಬೇಡಿರಿ. ನಾನು ಹೇಡಿಯನ್ನೇ ಅತ್ಯಂತವಾಗಿ ದ್ವೇಷಿಸುತ್ತೇನೆ »

ಸರದಾರರು ಮುಂಬಯಿಯ ಹಿಂದೂ ಮುಸ್ಲಿಮರಿಗೆ ಶಾಂತಿಯನ್ನು ಪದೇಶಿಸಿ ಹದಿನೈದು ದಿನದ ಮಟ್ಟಿಗೆ ಸಂಧಾನ ಮಾಡಿಕೊಳ್ಳಿರಿ; ಆ ಮೇಲೆ ಗಲಭೆಗಳೆದ್ದರೆ ನಾವು ಅದಕ್ಕೆ ಹೊಣೆಯಾದವರನ್ನು ದಂಡಿಸುವೆವೆಂದು ಆಶ್ವಾಸನ ಇತ್ತರು.

ಸರದಾರ ಪಟೇಲರು ನಾಗಪುರ ವಿಶ್ವವಿದ್ಯಾನಿಲಯದ ಪದವೀದಾನ ಸಮಾರಂಭದಲ್ಲಿ ಮಾಡಿದ ಭಾಷಣವೂ ಇದೇ ಭಾವನೆಗಳನ್ನು ವ್ಯಕ್ತಗೊಳಿದ್ದವು. ಅವರು ನಾಗಪುರದಲ್ಲಿ ಮಾಡಿದ ಸಾರ್ವಜನಿಕ ಭಾಷಣದಲ್ಲಿ ಹಿಂದೂ ಮುಸ್ಲಿಂ ಅಲ್ಪಸಂಖ್ಯಾಕರನ್ನು ಪರಸ್ಪರ ಭಾಗಗಳಿಗೆ ವರ್ಗಾಯಿಸುವ ಯೋಜನೆಯನ್ನೂ ಖಂಡಿಸಿದರು. "ಜನರನ್ನು ಅದಲು ಬದಲು ಮಾಡಬೇಕೆಂಬ ಜಿನ್ನಾಸಾಹೇಬರ ಸೂಚನೆ ಅವ್ಯವಹಾರ್ಯವಿದೆ. ಅಲ್ಲದೆ ಹಾಗೆ ಸೂಚಿಸುವದು ಹುಚ್ಚುತನ. ದಕ್ಷಿಣದಲ್ಲಿರುವ ಮುಸಲ್ಮಾನರು ಉತ್ತರಕ್ಕೆ ಹೋಗಲು ಮತ್ತು ಉತ್ತರದ ಹಿಂದುಗಳು ದಕ್ಷಿಣಕ್ಕೆ ಬರಲು ಸರ್ವಥಾ ಒಪ್ಪಿರಲಾರರು. ಹೀಗೆ ಅವರನ್ನು ವರ್ಗಾಯಿಸಲು ನೂರು ಜಿನ್ನಾರು ಪ್ರಯತ್ನಿಸಿದರೂ ಆದು ಸಾಧ್ಯವಾಗದು, ಎಂದು ಅವರು ಸಾರಿದರು.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು